# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ–೭೪
ಸಂಚಿಕೆ–೧ ಮತ್ತು ೨
ಜೂನ್–ಡಿಸೆಂಬರ್ ೧೯೮೯

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು–೫೬೦ ೦೧೮

# ವಿನಿಮಯಕ್ಕೆ ಬರುವ ಪತ್ರಿಕೆಗಳು

## ಕನ್ನಡ

**ದಿನಪತ್ರಿಕೆಗಳು :** ೧) ಉದಯವಾಣಿ, ೨) ಸಂಯುಕ್ತ ಭಾರತ, ೩) ಸಂಯುಕ್ತ ಕರ್ನಾಟಕ [ಹುಬ್ಬಳ್ಳಿ], ೪) ಕೋಲಾರವಾಣಿ, ೫) ವಿಜಯವಾಣಿ, ೬) ನವೋದಯ, ೭) ಬಯಲು ಸೀಮೆ, ೮) ಕೋಲಾರ ಪತ್ರಿಕೆ, ೯) ನವಧ್ವನಿ, ೧೦) ಹೊಸಪೇಟೆ ಟೈಮ್ಸ್, ೧೧) ರಾಯಚೂರು ವಾಣಿ, ೧೨) ಅರುಣ, ೧೩) ರಾಷ್ಟ್ರಬಂಧು, ೧೪) ಸಂಕ್ರಾಂತಿ, ೧೫) ದಾವಣಗೆರೆ ಟೈಮ್ಸ್, ೧೬) ನಾಡೋಜ, ೧೭) ನೇತಾಜಿ, ೧೮) ಮೈಸೂರು ಪತ್ರಿಕೆ, ೧೯) ಮೈಸೂರು ವಾಣಿ, ೨೦) ವೀರವಾಣಿ, ೨೧) ಸತ್ಯಕಾಮ.

**ವಾರಪತ್ರಿಕೆಗಳು :** ೧) ಕರ್ನಾಟಕ ರಾಜ್ಯಪತ್ರ, ೨) ಗ್ರಾಮ ಕೂಗು, ೩) ಗ್ರಾಮ ಸುದ್ದಿ, ೪) ಮುನ್ನಡೆ, ೫) ಕೆಂಬಾವುಟ, ೬) ಕಾನಾಡಾವೃತ್ತ ೭) ನಾಗರಿಕ, ೮) ನುಡಿಜೇನು, ೯) ಪ್ರಗತಿ ಮತ್ತು ಜನಜೀವನ, ೧೦) ಪ್ರಪಂಚ, ೧೧) ಬೆಟ್ಟದ ಹುಲಿ, ೧೨) ಬವಣೆ, ೧೩) ಬೆಳಕು, ೧೪) ರಾಷ್ಟ್ರಮತ, ೧೫) ವಿಕ್ರಮ, ೧೬) ವಿಶ್ವಕಲ್ಯಾಣ, ೧೭) ೧೮) ಸಂದರ್ಶನ, ೧೯) ದುರ್ಬಲಬಂಧು, ೨೦) ಸದ್ಗುರು, ೨೧) ವಿವಿಧವಾಣಿ, ೨೨) ಸತ್ಯ ವೇದಿಕೆ, ೨೩) ಪಿ.ವಿ.ಆರ್. ಪತ್ರಿಕೆ, ೨೪) ಯೋಗೇಶ, ೨೫) ಶ್ರೀಸಾಮಾನ್ಯ, ೨೬) ಕನ್ನಡಿಗ, ೨೭) ಸಂಜೆಮಲ್ಲಿಗೆ, ೨೮) ಗ್ರಾಮೀಣ ವಾಣಿ, ೨೯) ಮಲೆನಾಡ ಮಲ್ಲಿಗೆ, ೩೦) ಆಚಾರ, ೩೧) ಪುರವಾಣಿ, ೩೨) ಕರ್ನಾಟಕ ವೈಭವ, ೩೩) ಜನಕಲ್ಯಾಣ, ೩೪) ಜನಮತರಂಗ, ೩೫) ಒಕ್ಕಲಿಗರ ವಾರ್ತೆ, ೩೬) ಸಂದೇಶ, ೩೭) ಸನ್ಮಾರ್ಗ, ೩೮) ಜ್ವಾಲಾಮುಖಿ, ೩೯) ದುರ್ಬಲ ಬಂಧು, ೪೦) ಕನ್ನಡ ದೀವಿಗೆ.

**ಪಕ್ಷಪತ್ರಿಕೆಗಳು :** ೧) ಭಾರತ ಸಂದೇಶ, ೨) ಅರ್ಪಿತ, ೩) ಕಲಾದುಂಧುಬಿ, ೪) ಎಸ್.ಎಸ್.ಕೆ. ವಾರ್ತೆ. ೫) ಟ್ವಿನ್ ಸಿಟಿ ಗೈಡ್. ೬) ಆಭರಣ, ೭) ಕೈಗಾರಿಕಾ ಅಭಿವೃದ್ಧಿ.

**ಮಾಸಪತ್ರಿಕೆಗಳು :** ೧) ಆಧ್ಯಾತ್ಮ ಪ್ರಕಾಶಿಕೆ, ೨) ಅನುಗ್ರಹ, ೩) ಆರ್ಯಸಂಸ್ಕೃತಿ, ೪) ಅಮೆರಿಕನ್ ವಾರ್ತಾಪತ್ರ, ೫) ಆತ್ಮಧರ್ಮ, ೬) ಉತ್ಥಾನ, ೭) ಕಲಾದರ್ಶನ, ೮) ಕಲ್ಯಾಣಕಿರಣ, ೯) ಕರ್ನಾಟಕ ವಿಕಾಸ, ೧೦) ಕುಶಲ, ೧೧) ಇಂಡಿಯನ್ ಕಾಫಿ, ಗಾಯನಗಂಗಾ, ೧೩) ಗ್ರಂಥಲೋಕ, ೧೪) ಗುರುದೇವ, ೧೫) ಜನಪದ ವಿಚಾರ, ೧೬) ಗೋಕುಲ, ೧೭) ಜೀವನ ಶಿಕ್ಷಣ, ೧೮) ತರಳಬಾಳು ವಾರ್ತಾಪತ್ರ, ೧೯) ದಾಸವಾಣಿ, ೨೦) ದಿವ್ಯಜ್ಯೋತಿ, ೨೧) ದೆಹಲಿ ಕನ್ನಡಿಗ, ೨೨) ಧರ್ಮಶ್ರೀ, ೨೩) ಧರ್ಮಪ್ರಭ, ೨೪) ದೀರ್ಘಾಯು, ೨೫) ನೇಸರು, ೨೬) ಪರಂಜ್ಯೋತಿ, ೨೭) ಪರಿಮಳ, ೨೮) ೨೯) ಪರಿಚಯ, ೩೦) ತಾಯಿ ನುಡಿ ೩೧) ಬಂಟರವಾಣಿ, ೩೨) ಬಸವಪಥ, ೩೩) ಕನ್ನಡ ವಾರ್ತೆ, ೩೪) ತುಷಾರ, ೩೫) ಭಾರತದರ್ಶನ, ೩೬) ಮೊಗವೀರ, ೩೭) ಯುಗಪುರುಷ,

[ರಕ್ಷಾಕವಚದ ೩ನೆಯ ಪುಟವನ್ನು ನೋಡಿ]



# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ – ೭೪, ಸಂಚಿಕೆ – ೧, ೨

ಜೂನ್ – ಡಿಸೆಂಬರ್ ೧೯೮೯

ಸಂಪಾದಕರು

ಡಾ|| ಬಸವರಾಜ ಕಲ್ಗುಡಿ

ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮

## ಸಂಪಾದಕರ ನುಡಿ

ಜೂನ್ ಹಾಗೂ ಡಿಸೆಂಬರ್ ೧೯೮೯ರ ಸಂಯುಕ್ತ ಸಂಚಿಕೆ ಈಗ ಹೊರಬರುತ್ತಿದೆ. ಶಾಸನ-ಸಾಹಿತ್ಯ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ಈ ಸಂಚಿಕೆಯಲ್ಲಿವೆ. ವೈಚಾರಿಕ ಚರ್ಚೆಗೆ, ವಾಗ್ವಾದಕ್ಕೆ ದಾರಿಯನ್ನು ಹಾಕಿಕೊಡುವ ಅನೇಕ ಲೇಖನಗಳನ್ನು ಇಲ್ಲಿ ಗಮನಿಸಬಹುದು. ಇಂಥ ಸಂಚಿಕೆಗಳ ಮುಖ್ಯ ಗುಣ ಚರ್ಚೆಯನ್ನು ಬೆಳೆಸಬೇಕು ಎನ್ನುವುದೇ ಆಗಿದೆ. ಈ ದೃಷ್ಟಿಯಿಂದ ಸಾಹಿತ್ಯಕ ಸಂಶೋಧನೆಯನ್ನು ಅಂತರ್ ಶಿಸ್ತೀಯ ವಿಚಾರಧಾರೆಯಿಂದ ನೋಡುವ ಯೋಚನೆಯನ್ನು ಮುಂದಿನ ಸಂಚಿಕೆಗಳಲ್ಲಿ ತರಬಹುದೆನ್ನುವ ಆಶಯ ನನ್ನದು.

ಈ ಸಂಚಿಕೆಗಳಲ್ಲಿಯ ಲೇಖನಗಳ ಎಲ್ಲ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆಯಾಗಿರುತ್ತಾರೆ. ಅವರು ತಮ್ಮ ಅಭಿಪ್ರಾಯಗಳನ್ನು ವಾಗ್ವಾದಗಳಲ್ಲಿ ಬೆಳೆಸುತ್ತಾರೆ.

ಪರಿಷತ್ಪತ್ರಿಕೆಯ ಪ್ರಕಟಣೆಗೆ ಯಾರಾದರೂ ಲೇಖನಗಳನ್ನು ಕಳಿಸಿದ್ದು, ಆ ಲೇಖನಗಳು ಬೇರೆ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿದ್ದರೆ ಅದರ ಬಗ್ಗೆ ಸೂಚನೆಯನ್ನು ಕೂಡಲೇ ಸಂಪಾದಕರಿಗೆ ಲೇಖಕರು ದಯವಿಟ್ಟು ತಿಳಿಸುವುದು.

ಸಂಪಾದಕರು

# ಪರಿವಿಡಿ

# ಹಿರೇಮೈಲಾರದ ಶಾಸನಗಳು

ಡಾ|| ಎಂ. ಬಿ. ನೇಗಿನಹಾಳ

ಹಿರೇಮೈಲಾರ ಕರ್ನಾಟಕದ ಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದು. ಅಲ್ಲಿರುವ ಮೈಲಾರದೇವರ ಪ್ರಾಚೀನ ದೇವಾಲಯ ಈ ಪ್ರಸಿದ್ಧಿಗೆ ಕಾರಣ. ಪ್ರತಿವರ್ಷ ಭಾರತ ಹುಣ್ಣಿಮೆ (ಮಾಘ ಶು. ೧೫)ಗೆ ನಡೆಯುವ ಮೈಲಾರದೇವರ ಕಾರಣಿ ಕೋತ್ಸವಕ್ಕೆ ೪-೫ ಲಕ್ಷ ಜನ ಸೇರುತ್ತಾರೆ. ಬಹು ಅದ್ಧೂರಿಯಿಂದ ಜರಗುವ ಈ ಜಾತ್ರೆ ನಾಡಿನಾದ್ಯಂತ ಜನಮನದ ಲಕ್ಷ್ಯ ಸೆಳೆಯುತ್ತಿರುವುದು ಸ್ವಾಭಾವಿಕ ವಾಗಿದೆ.

ಹೂವಿನ ಹಡಗಲಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ತುಂಗಭದ್ರಾನದಿ ಪಶ್ಚಿಮವಾಹಿನಿಯಾಗಿ ಹರಿದು ಪುನಃ ಪೂರ್ವಾಭಿಮುಖವಾಗಿ ಹಾವನೂರಿನಿಂದ ಮುಂದುವರಿಯುತ್ತದೆ. ಎಂದರೆ ಮೈಲಾರ ಕ್ಷೇತ್ರವನ್ನದು ಉಂಗುರದಂತೆ ಸುತ್ತು ವರಿದಿದೆ. ಇದರ ಸುತ್ತಲಿನ ತಟದ ಮೇಲೆ ಕುರುವತ್ತಿ, ಐರಣಿ, ಚೌಡದಾನಪುರ, ಗುತ್ತಲ, ಹಾವನೂರು, ಹೊಳಲ ಮೊದಲಾದ ಇತಿಹಾಸ ಪ್ರಸಿದ್ಧ ಊರುಗಳಿವೆ. ಪೂರ್ವ ಬದಿಯಲ್ಲಿ ಮಾತ್ರ ಕಪ್ಪತಗುಡ್ಡದ ಸಾಲು ಗೋಡೆಯಂತೆ ಎದ್ದು ನಿಂತಿದೆ.

ಇಲ್ಲಿರುವ ಒಟ್ಟು ನಾಲ್ಕು ಶಾಸನಗಳು ಈವರೆಗೆ ಸಂಶೋಧಿಸಲ್ಪಟ್ಟು 'ಇನ್‌ಸ್ಕ್ರಿಪ್ಶನ್ಸ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ' ಸಂ. ೧ ದಲ್ಲಿ ನಮೂದಾಗಿವೆ. ಆದರೆ ದಕ್ಷಿಣ ಭಾರತದ ಶಾಸನಗಳು ಸಂಪುಟ xi ರಲ್ಲಿ ಮೂರು ಶಾಸನಗಳ ಪೂರ್ಣ ಪಾಠ ಮಾತ್ರ ಪ್ರಕಟವಾಗಿವೆ (ನಂ. ೧೧೨, ೧೮೩ ಮತ್ತು ೩೮೨).

ಇಲ್ಲಿನ ಮೈಲಾರಲಿಂಗ ದೇವಾಲಯದ ಪರಿಸರದಲ್ಲಿ ಹಲವಾರು ಸಣ್ಣದೊಡ್ಡ ಗುಡಿಗಳಿವೆ. ಮುಖ್ಯ ದೇವರಾದ ಮೈಲಾರ ದೇವಾಲಯ, ಕಲ್ಮೇಶ್ವರ ದೇವಾಲಯ ಮತ್ತು ಹೆಗ್ಗಪ್ಪನ ದೇವಾಲಯಗಳು ಪ್ರಾಚೀನ ಕಾಲದ ವಾಸ್ತುಗಳಾಗಿವೆ. ಸದ್ಯಕ್ಕಿರುವ ಮೈಲಾರ ಊರಿನ ಆಗ್ನೇಯದಲ್ಲಿ ಸು. ಅರ್ಧ ಕಿ. ಮೀ. ಅಂತರದ ಮೇಲೆ ಬೇಚಿರಾಕ್ ಹಳ್ಳಿಯೊಂದರ ಅವಶೇಷಗಳು ಕಂಡುಬರುತ್ತವೆ. ಇಲ್ಲಿ

ಪ್ರಾಚೀನ ಕಾಲದ ಸೋಮಲಿಂಗೇಶ್ವರ ದೇವಾಲಯ, ಹನುಮಂತದೇವರ ಗುಡಿ ಮುಂತಾದ ಹಲವು ಅವಶೇಷಗಳು ಈಗಲೂ ಸುಸ್ಥಿತಿಯಲ್ಲಿವೆ. ಮೈಲಾರದ ಅತಿ ಪ್ರಾಚೀನ ಶಾಸನದ ಕಾಲ ಕ್ರಿ.ಶ. ೧೦೪೭. ಇದು ಪ್ರಸ್ತುತ ಬೇಚಿರಾಕ್ ಪ್ರದೇಶದಲ್ಲಿಯೇ ದೊರೆಯುತ್ತದೆ. ಈ ಪಾಳು ಪ್ರದೇಶವನ್ನು ಅಲ್ಲಿನ ಜನ ಮೂಲ ಮೈಲಾರವೆಂದು ಹೇಳುತ್ತಾರೆ. ಆದರೆ ಮೇಲೆ ತಿಳಿಸಿದ ಈ ಪಾಳೂರಿನಲ್ಲಿರುವ ಕ್ರಿ.ಶ. ೧೦೪೭ರ ಶಾಸನದಲ್ಲಿ ಮೈಲಾರ ಊರಿನ ಹೆಸರಿಲ್ಲ. ಬದಲು ಕುರುವತ್ತಿಯ ಉಲ್ಲೇಖ ಬಂದಿದೆ. ಸದ್ಯ ಪ್ರಸಿದ್ಧಿಯಲ್ಲಿರುವ ಮೈಲಾರ ದೇವಾಲಯದ ಪ್ರದೇಶದಲ್ಲಿ ಮುಂಚೆ ಸೀಗೆಯ ಮೆಳೆ ಹಬ್ಬಿತ್ತೆಂದೂ ಅದರ ನಡುವೆ ಇದ್ದ ಹುತ್ತಿನೊಳಗೆ ಸ್ವಯಂಭೂಲಿಂಗ ರೂಪದಲ್ಲಿ ಮೈಲಾರ ದೇವರು ಪ್ರಕಟವಾದನೆಂದೂ ಮೈಲಾರದ ಜನ ಪರಂಪರೆಯಿಂದ ಬಂದ ವದಂತಿಯನ್ನು ಹೇಳುತ್ತಾರೆ.

ಸದ್ಯದ ಮೈಲಾರಲಿಂಗ ದೇವಾಲಯದ ರಂಗಮಂಟಪದಲ್ಲಿನ ಉತ್ತರ ಕಂಬದ ಮೇಲೆ ಕೆತ್ತಲಾಗಿರುವ ಕ್ರಿ.ಶ. ೧೪೩೬ರ ಕನ್ನಡ ಶಾಸನದಲ್ಲಿ 'ಉಂಗುಲಾಲದ ಶ್ರೀಮನ್ಮಹಾಮಯಿಲಾರ ದೇವರು' ಎಂಬ ಉಲ್ಲೇಖ ಬಂದಿರುವುದು ಇಲ್ಲಿ ತುಂಬ ಗಮನಾರ್ಹ. ಎಂದರೆ ಸದ್ಯ ಮೈಲಾರ ಎಂದು ಕರೆಯಲಾಗುವ ಊರು ಮುಂಚೆ ಉಂಗುಲಾಲ ಎಂದಿದ್ದಿತೆಂಬ ಅಂಶ ಸ್ಪಷ್ಟವಾಗುತ್ತದೆ. ಈ ಮಾತನ್ನು ಅಲ್ಲಿನ ಸ್ಥಾನಿಕರಾದ ಒಡೆಯರ ಮನೆತನದವರು ಬಳಸುವ ಶ್ರೀಮುಖ ಅಥವಾ ಬಿರುದಾವಳಿಯಲ್ಲಿ ಕೂಡ ಕಾಣಬಹುದಾಗಿದೆ. ಉದಾಹರಣೆಗೆ ಆ ಶ್ರೀಮುಖವನ್ನಿಲ್ಲಿ ನೋಡಬಹುದು :

> ಶ್ರೀಮನ್ಮಹಾಕಪಿಲಮುನಿ ಕಲಿ ಮೈಲಾರ ಸಿಂಹಾಸನಕ್ಕಧಿಪತಿಗಳಾದ, ಕರಿಯೆಳೆ ಭಂಡಾರಕ್ಕೆ ಕಾರಣಕರ್ತರಾದ, ಆಚಾರ-ವಿಚಾರಕ್ಕೆ ಅಗ್ರಗಣ್ಯರಾದ ಆದಿಮೀಗಗೊಂದಿ ಪುರವರಾಧೀಶ್ವರರಾದ ಗುರುಗೋಮುನಿ ಸಾಂಪ್ರದಾಯಕರಾದ, ವುಂಗ್ಲಾರಕ್ಷೇತ್ರ ತುಂಗಭದ್ರಾ ತೀರವಾಸಿಗಳಾದ ನಿತ್ಯಕರ್ಮಾನುಷ್ಠಾನ ಹರಿಹರ ಧ್ಯಾನ ಪರಾಯಣರಾದ ವ್ರತನೇಮ ನಿತ್ಯಾಚರಿತರಾದ ಗೋಬ್ರಾಹ್ಮಣ ಪ್ರತಿಪಾಲಕರಾದ ನಯ ವಿನಯ ದಯಾದಾಕ್ಷಿಣ್ಯ ಪರೋಪಕಾರಿಗಳಾದ ವಿಭೂತಿ ರುದ್ರಾಕ್ಷಿ ಮಾಲಿಕಾಭರಣ ಭೂಷಿತರಾದ ತ್ರಿಕಾಲ ಶಿವಪೂಜಾ ಧುರಂಧರರಾದ ನೀತಿ ಕಾರ್ಯಪ್ರವೀಣರಾದ ನಿತ್ಯಾನ್ನದಾನವಿನೋದಿಗಳಾದ ಏಕವಾಕ್ಯ ಪ್ರತಿಪಾಲಕರಾದ ಸತ್ಯಸದಾಚಾರ ಸಿತ್ಯಪರಿಪೂರ್ಣರಾದ ಅಖಂಡಿತ ಲಕ್ಷ್ಮೀ ಸದಾ ಪ್ರಸನ್ನರಾದ ಮಹಾರಾಜಾಧಿರಾಜ ಪೂಜಿತ ರಾಜಮಾನ್ಯ ರಾಜಶ್ರೀ ಹಿರೇಮೈಲಾರದ........ ಒಡೆಯರ್ ಸ್ವಾಮಿಗಳವರ... ....

ಇದರಲ್ಲಿ 'ತುಂಗಭದ್ರಾತೀರ ಉಂಗ್ಲಾರಕ್ಷೇತ್ರ'ವೆಂದಿರುವುದು ಶಾಸನೋಕ್ತ ಉಂಗುಲಾಲವೆಂಬುದರ ತರುವಾಯದ ರೂಪ, ಎಂದರೆ ಈಗಿನ ಹಳೆಯ ಮೈಲಾರ ಊರಿನ ಜಾಗವೆಂದು ಭಾವಿಸಲಾಗುವ ಊರೇ ಪ್ರಾಚೀನ ಕುರುವತ್ತಿಯಾಗಿದ್ದು ಮೈಲಾರಲಿಂಗನ ದೇವಾಲಯದಂತೆಯೇ ಈಗಿನ ನದೀ ದಂಡೆಯ ಕುರುವತ್ತಿಯಲ್ಲಿ ಚಾಲುಕ್ಯರ ಪ್ರಸಿದ್ಧ ದೇವಾಲಯ 'ಆಹವ ಮಲ್ಲೇಶ್ವರ'ವನ್ನು ಕಟ್ಟಿದ್ದರಿಂದಾಗಿ ಅಲ್ಲಿಯೂ ಜನವಸತಿ ಬೆಳೆದು ಅದೇ ಪ್ರತ್ಯೇಕ ಊರಾಯಿತು ಮತ್ತು ಮೈಲಾರ ಅಥವಾ ಉಂಗ್ಲಾರವೇ ಪ್ರತ್ಯೇಕ ಊರಾಗಿ ಕಾಲಾಂತರದಲ್ಲಿ ರೂಪಗೊಂಡವೆಂದು ಹೇಳಬಹುದು.

ಹೀಗೆ ಉಂಗ್ಲಾಲ ಅಥವಾ ಉಂಗ್ಲಾರ ಎಂಬ ಗ್ರಾಮನಾಮ ಹಿಂದೆ ಬಿದ್ದು ದೇವತಾವಾಚಕವಾದ ಮೈಲಾರ ಎಂಬ ಹೆಸರು ಕಾಲಾಂತರದಲ್ಲಿ ಗ್ರಾಮವಾಚಕವಾಗಿ ಗಟ್ಟಿಗೊಂಡಿತು. ದೇವರ ಹೆಸರೇ ಪ್ರಸಿದ್ಧಿಗೆ ಬಂದು ತರುವಾಯದಲ್ಲಿ ಅದೇ ಊರ ಹೆಸರಾಗಿರುವ ಉದಾಹರಣೆಗಳು ಕರ್ನಾಟಕದಲ್ಲಿ ಬೇಕಾದಷ್ಟಿವೆ. ಪೊರಿಗೆಱೆ>[ಪೊಲಿಗೆಱೆ]>ಪುಲಿಗೆರೆ>ಹುಲಿಗೆರೆ ಇಂದು ಲಕ್ಷ್ಮೇಶ್ವರ ಎಂದಾಗಿ ಮಾರ್ಪಡಲು ಅಲ್ಲಿನ ಲಕ್ಷ್ಮೇಶ್ವರ ದೇವಾಲಯವೇ ಕಾರಣ. ಅದೇ ರೀತಿ ಕೂಡಲ್-ಕೂಡಲೂರು ಇಂದು ಹರಿಹರವೆಂದು ಪ್ರಸಿದ್ಧವಾಗಲು ಅಲ್ಲಿರುವ ಹರಿಹರ ದೇವಾಲಯವೇ ಕಾರಣ.

ಮೈಲಾರ ಊರ ಹೆಸರನ್ನು ಕುರಿತಂತೆ ಇಲ್ಲಿ ಇನ್ನೊಂದು ಅಂಶವನ್ನು ಕೂಡ ಗಮನಿಸಬೇಕಾಗಿದೆ. ಪ್ರಸ್ತುತ ಮೈಲಾರಲಿಂಗ ದೇವಾಲಯದ ಪೌಳಿಯ ಹೊರಬದಿಯಲ್ಲಿರುವ ಕಲ್ಲೇಶ್ವರ ಅಥವಾ ಕಲ್ಮೇಶ್ವರ ದೇವಾಲಯದಲ್ಲಿನ ಕ್ರಿ.ಶ. ೧೦೮೩ನೆಯ ವರ್ಷದ ಶಾಸನದಲ್ಲಿ ಅಲ್ಲಿನ ದೇವರನ್ನು 'ಗುಂಗುಱಾಚಂದ ಸ್ವಯಂಭೂಕಲಿನಾಥ' ಎಂದು ಕರೆದುದು ಕಂಡುಬರುತ್ತದೆ. ಇಲ್ಲಿನ 'ಗುಂಗುಱಾಚಂದ' ಎಂಬುದನ್ನು ಸ್ಥಳವಾಚಕವೆಂದು ಪರಿಗಣಿಸಿದರೆ ಪ್ರಸ್ತುತ ಕ್ಷೇತ್ರಕ್ಕೆ ಕ್ರಿ.ಶ. ೧೪೩೬ರ ಪೂರ್ವದಲ್ಲಿ ಎಂದರೆ ಮೇಲಿನ ಶಾಸನ ಕಾಲಾವಧಿಯಲ್ಲಿ ಬೇರೊಂದು ಹೆಸರಿತ್ತೆಂದು ಹೇಳಬೇಕಾಗುತ್ತದೆ. 'ಗುಂಗುಱಾ' ಎಂದಿರುವ ಶಾಸನ ಭಾಗವನ್ನು 'ಇನ್‌ಸ್ಕ್ರಿಪ್ಶನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ' ಸಂ. ೧ರಲ್ಲಿ 'ಗುಂಗೂರು' ಎಂದು ಕೊಡಲಾಗಿದೆ. (ಪು. ೨೮೬, ನಂ. ೨೧೩) ಈ ಹೆಸರು (ದ. ಭಾ. ಶಾಸನ, ಸಂ. IX-i ರ ಸಂಪಾದಕರು ಓದಿರುವಂತೆ) ಗುಂಗುಱಾ ಎಂಬುದು ಗುಂಗೂರು ಎಂದಿರುವುದು ನಿಜವಾದರೆ 'ಚಂದ' ಎಂದಿರುವ ಭಾಗ ಮುಂದಿನ 'ಸ್ವಯಂಭೂಕಲಿನಾಥ' ಎಂಬುದಕ್ಕೆ ಸಂಬಂಧಪಡುವಂತಾಗುತ್ತದೆ. ಆಗ 'ಗುಂಗೂರ ಚಂದ (ಚಂಡ?) ಸ್ವಯಂಭೂಕಲಿನಾಥ' ಎಂದು ಪ್ರಸ್ತುತ ಭಾಗವನ್ನು ಓದಬೇಕಾಗುತ್ತದೆ. ಒಟ್ಟಿನಲ್ಲಿ ಗುಂಗೂರು ಅಥವಾ ಗುಂಗುಱಾ ಎಂಬುದನ್ನು ಗ್ರಾಮವಾಚಕವೆಂದು ಗ್ರಹಿಸಿದ್ದಾದರೆ ಉಂಗುಲಾಲ ಮತ್ತು ಗುಂಗೂರು ಗುಂಗುಱಾ ಇವು ಒಂದೇ ಊರಿನ

ಎರಡು ಬೇರೆ ಬೇರೆ ಹೆಸರುಗಳಾಗುತ್ತವೆ. ಆದರೆ ಭಾಷಾ ವೈಜ್ಞಾನಿಕವಾಗಿ ಇವು ಒಂದೇ ಎಂದು ಸ್ಥಾಪಿಸುವುದು ತುಂಬಾ ದುಸ್ತರ. ಗುಂಗುಱಾಚಂದ ಅಥವಾ ಗುಂಗುಱ ಎಂಬುದು ಒಂದು ಗ್ರಾಮವಾಚಕವೇ ಆಗಿದ್ದಲ್ಲಿ ಅದೊಂದು ಬಹು ವಿಚಿತ್ರವಾದ ಮತ್ತು ಅನ್ಯತ್ರ ಹೋಲಿಕೆಯೇ ಇಲ್ಲದ ಸ್ಥಳವಾಚಕವಾಗುತ್ತದೆ. ಸದ್ಯ ಇದರ ಬಗ್ಗೆ ಹೆಚ್ಚಿಗೆ ಹೇಳಲು ಅವಕಾಶವಿಲ್ಲವೆಂದು ಭಾವಿಸಿ ಉಂಗುಲಾಲ>ಉಂಗ್ಲಾರ ಎಂಬುದಕ್ಕೆ ೫೦೦ ವರ್ಷಗಳ ಪರಂಪರೆಯಿರುವುದರಿಂದ ಪ್ರಸ್ತುತ ಕ್ಷೇತ್ರದ ಹೆಸರು ಮೂಲತಃ ಉಂಗುಲಾಲವಾಗಿತ್ತೆಂದು ಇಟ್ಟುಕೊಳ್ಳಬಹುದು.

ಕ್ರಿ.ಶ. ೧೦೪೭ರ ಶಾಸನದಲ್ಲಿ ಮೂಲಸ್ಥಾನ ದೇವರು ಮತ್ತು ಸ್ವಯಂಭೂ ದೇವರು ಎಂಬ ಹೆಸರುಗಳು ಮಾತ್ರ ಕಂಡುಬರುತ್ತವೆ. ಇವುಗಳಲ್ಲಿ ಮೂಲಸ್ಥಾನ ದೇವರೆಂಬುದು ಬಹುಶಃ ಈಗಿನ ಬೇಚಿರಾಕ್ ಪ್ರದೇಶದಲ್ಲಿ ನಿಂತಿರುವ ಸೋಮಲಿಂಗ ದೇವಾಲಯವೇ ಅದೇ ರೀತಿ ಸ್ವಯಂಭೂ ಎಂಬುದು ಈ ಮೈಲಾರಲಿಂಗ ದೇವರೆಂದು ಪ್ರಖ್ಯಾತವಾಗಿರುವ ದೇವರೇ ಎಂದು ತಿಳಿಯಲವಕಾಶವಿದೆ. ಶ್ರೀ ಜಿ.ಎಚ್. ಖರೆ ಎಂಬ ಮರಾಠಿ ವಿದ್ವಾಂಸರು ಸುಮಾರು ಇದೇ ರೀತಿಯಾಗಿ ಊಹಿಸಿದ್ದಾರೆ (ಮಹಾರಾಷ್ಟ್ರಾಂಚಿ ಚಾರದೈವತೆ, ಪು. ೧೩೬). ಇವೆರಡು ದೇವಾಲಯಗಳು ವಾಸ್ತುಶೈಲಿಯಲ್ಲಿ ಒಂದನ್ನೊಂದು ತದ್ವತ್ತಾಗಿ ಹೋಲುತ್ತವೆ. ಅದರ ವಿವರಗಳು ಇಲ್ಲಿ ಅನಾವಶ್ಯಕ.

ಬೇಚಿರಾಕ್ ಪ್ರದೇಶದಲ್ಲಿ ಮೇಲೆ ತಿಳಿಸಿದ ಕ್ರಿ.ಶ. ೧೦೪೭ರ ಶಾಸನವಲ್ಲದೆ ಸೋಮಲಿಂಗ ದೇವಾಲಯದ ಮುಂದಿನ ದೀಪಸ್ತಂಭದ ಮೇಲೆ ಇನ್ನೊಂದು ಚಿಕ್ಕ ಶಾಸನ ಕೆತ್ತಲಾಗಿದೆ. ಇದರ ಕಾಲ ಸ್ಪಷ್ಟವಿಲ್ಲ. ಬಹುಶಃ ಶಾಸನ ಕೆತ್ತಿರುವ ದೀಪಸ್ತಂಭವನ್ನು ದೇವಾಲಯಕ್ಕೆ ಕಾಣಿಕೆಯಾಗಿ ನೀಡಿರುವ ಸಂಗತಿಯನ್ನು ಅದು ಹೇಳುತ್ತದೆ.

ಕಲ್ಮೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಸ್ವಯಂಭೂ ಕಲಿನಾಥನಿಗೆ ನಂದಿಯನ್ನು ಸ್ಥಾಪಿಸಲಾದ ಸಂಗತಿ ಉಕ್ತವಾಗಿದೆ. ಈ ದೇವಾಲಯ ಚಿಕ್ಕದಾಗಿದೆ. ಆದರೆ ಅದು ಕ್ರಿ.ಶ. ೧೨೪೩ಕ್ಕೆ ಪೂರ್ವದಿಂದಲೇ ಅಸ್ತಿತ್ವದಲ್ಲಿತ್ತೆಂದು ಹೇಳಲು ಪ್ರಸ್ತುತ ಶಾಸನ ಆಧಾರವೀಯುತ್ತದೆ.

ತರುವಾಯ ನಮಗೆ ಇಲ್ಲಿನ ಪರಿಸರದಲ್ಲಿ ದೊರೆಯುವ ಮತ್ತು ಸ್ಪಷ್ಟ ಕಾಲ ನಿರ್ದೇಶನವುಳ್ಳ ಶಾಸನವೆಂದರೆ ಶಕ ವರ್ಷ ೧೩೩೪ ದುಂದುಭಿ ಸಂವತ್ಸರ ಮಾರ್ಗಶೀರ್ಷ ಶುದ್ಧ ೬ ರವಿವಾರದಂದು ಹುಟ್ಟಿದ ಶಾಸನ. ಎಂದರೆ ಕ್ರಿ.ಶ. ೧೪೧೨ರ ಛಟ್ಟಿ ಹಬ್ಬದ ಭಂಡಾರ ಪೂಜೆಯ ಮಿತಿಯನ್ನು ಇದು ಸೂಚಿಸುತ್ತದೆ. ಗೌತಮ ಗೋತ್ರದ ಋಕ್ ಶಾಖೆಯ ತ್ರಿಕಾಂಡೆಯ ನಾಗಣ್ಣನ ಮಗ ಗಂಗರಸ ಎಂಬವನು ಶ್ರೀ ಮಾಳಲದೇವಿಗೆ ಲೀಲಾ ಸುಖನಾಸಿ ನಚಗ್ರಹ (ನಾಟ್ಯಗೃಹ) ಮತ್ತು

ರಂಗಮಂಟಪಗಳನ್ನು ನಿರ್ಮಿಸಿದನೆಂದು ಈ ಶಾಸನ ದಾಖಲಿಸಿದೆ. ಈ ಶಾಸನ ಕಾಲಕ್ಕಾಗಲೇ ಈ ದೇವರ ಆರಾಧನೆಯಲ್ಲಿ ಭಂಡಾರ ಘಟ್ಟ (ಮಾರ್ಗ ಶು. ಷಷ್ಟಿ) ಯ ಹಬ್ಬ ಪ್ರಾಮುಖ್ಯ ಪಡೆದಿತ್ತೆಂದು ಕೂಡ ತಿಳಿಯುವಂತಾಗುತ್ತದೆ. ಇದೇ ಮಿತಿಯ ಉಲ್ಲೇಖ ಮುಂದಿನ ರುಧಿರೋದ್ಗಾರಿ ಸಂವತ್ಸರದಲ್ಲಿ (ಕ್ರಿ. ಶ. ೧೪೪೩) ಹುಟ್ಟಿದ ಹೆಗ್ಗಪ್ಪನ ಗುಡಿಯ ಶಾಸನದಲ್ಲೂ ಬಂದಿದೆ. ಈ ಹೆಗ್ಗಪ್ಪನ ಗುಡಿಯ ಶಾಸನ ಕೂಡ ಮೇಲ್ಕಾಣಿಸಿದ ಶಾಸನದಲ್ಲಿ ಉಲ್ಲೇಖಿತನಾದ ಗಂಗರಸ ಅಥವಾ ಗಂಗಯ್ಯನೆ ಹಾಕಿಸಿದ್ದೆಂದು ಕಂಡುಬರುತ್ತದೆ. ಹೆಗ್ಗಪ್ಪದೇವರ ರಂಗಮಂಟಪ ನಿರ್ಮಿಸಿದ ಉಲ್ಲೇಖ ಅದರಲ್ಲಿದೆ.

ಇನ್ನುಳಿದ ಶಾಸನಗಳಲ್ಲಿ ಎರಡು ಸಂಸ್ಕೃತ ಭಾಷೆ ಮತ್ತು ಕನ್ನಡ ಲಿಪಿಯಲ್ಲಿವೆ. ಮೈಲಾರದೇವರ ರಂಗಮಂಟಪದ ದಕ್ಷಿಣ ಬದಿಯ ಕಂಬದ ಪೂರ್ವ ಮತ್ತು ಉತ್ತರ ಬದಿಗಳಲ್ಲಿ ಇವನ್ನು ಕೆತ್ತಲಾಗಿದೆ. ಎರಡೂ ಪದ್ಯಮಯವಾಗಿದ್ದು ಪೂರ್ವ ಬದಿಯ ಶಾಸನದಲ್ಲಿ ಕಂಡರಣೆಕಾರನು ಮಾಡಿರುವ ತಪ್ಪುಗಳು ಬಹಳವಾಗಿವೆ. ಇದರಲ್ಲಿ ಮೈಲಾರಾಖ್ಯ ಶಿವಸ್ಯ, ಮೈಲಾರಾಖ್ಯ ಗಿರೀಶಸ್ಯ ಎಂದು ಎರಡು ಬಾರಿ ದೇವರ ಉಲ್ಲೇಖ ಬಂದಿದೆ. ಉತ್ತರ ಬದಿಯ ಶಾಸನ ಪಾಠ ಹೆಚ್ಚು ಶುದ್ಧವಾಗಿ ಕೆತ್ತಲ್ಪಟ್ಟಿದ್ದು ಕಂಡುಬರುತ್ತದೆ. ಇದರಲ್ಲಿ ದೇವರನ್ನು "ಮಾಲಚೀ ಪತಿಃ ಈಶ್ವರ ಮೈಲಾರೇತಿ ಪ್ರಸಿದ್ಧಃ" ಎಂದು ಕರೆದಿದೆ. ಗಂಗಣ್ಣ ಅಥವಾ ಗಂಗರಸ ಮಾಡಿಸಿದ ಶಿಲಾಮಂಟಪವನ್ನು 'ಚಿತ್ರತೋರಣ ಸಂಯುಕ್ತಂ, ಚತುಸ್ತಂಭವಿರಾಜಿತಂ' ವಾತಾಯನೇನ ರಚಿತಂ, ನಾನಾರತ್ನ ಪ್ರತೀಕಾಶಂ' ಎಂದು ಮುಂತಾಗಿ ವರ್ಣಿಸ ಲಾಗಿದೆ.

ಉತ್ತರ ಕಂಬದ ಮೇಲಿರುವ ಶಾಸನ ತಕ್ಕಷ್ಟು ದೀರ್ಘವಾಗಿದ್ದು ಕನ್ನಡ ಭಾಷೆಯಲ್ಲಿದೆ. ಇದರಲ್ಲಿ ಶಕವರುಷ ೧೩೫೮ನೆಯ ನಳಸಂವತ್ಸರದ ವೈಶಾಖ ಬ. ೧೧ ಎಂದು ಮಿತಿ ನಿರ್ದೇಶನವಿದೆ. ಪ್ರೌಢದೇವರಾಯನ ಆಳ್ವಿಕೆಯಲ್ಲಿ ಹುಟ್ಟಿರುವ ಈ ಶಾಸನ 'ಶ್ರೀಮದ್ರಾಜಾಧಿರಾಜ ಪರಮೇಶ್ವರ ಪೂರ್ವ ದಕ್ಷಿಣ ಪಶ್ಚಿಮ ಸಮುದ್ರಾಧೀಶ್ವರಂ ಅರಿರಾಯವಿಭಾಡ ಗಜವೇಂಟೆಕಾಱ' ಎಂಬ ಅವನ ಬಿರುದನ್ನು ಪ್ರಯೋಗಿಸಿದೆ. ಪ್ರೌಢದೇವರಾಯನ ಮಹಾಪ್ರಧಾನ ಸಿಂಗಣ್ಣ ದಂಡ ನಾಯಕನ ನಿರೋಪದಿಂದ ಗೌತಮ ಗೋತ್ರದ ಋಕ್ ಶಾಖೆಯ ತ್ರಿಕಾಂಡೆಯ ನಾಗಪಯ್ಯನ ಮಗನೂ ಹೆಗ್ಗಡೆ ದೇವರಸನ ತಮ್ಮನೂ ಆದ ಗಂಗರಸನು ಪ್ರಸ್ತುತ ಮೈಲಾರ ದೇವರ ಶಿಲಾಮಂಟಪ ರಚಿಸಿದನೆಂದು ಹೇಳುತ್ತದೆ. ಈಗಾಗಲೇ ತಿಳಿಸಿರುವಂತೆ 'ಶ್ರೀಮದ್ದೇವತಾ ಚಕ್ರವರ್ತಿ ಉಂಗುಲಾಲದ ಶ್ರೀಮನ್ಮಹಾ ಮಯಿಲಾರ ದೇವರು' ಎಂಬ ನಿರ್ದಿಷ್ಟ ಉಲ್ಲೇಖ ಕೂಡ ಇದರಲ್ಲಿದೆ. ಒಟ್ಟಿನಲ್ಲಿ ಗಂಗಿ ಮಾಳವ್ವ ಅಥವಾ ಮಾಳಲದೇವಿಯ ಲೀಲಾಸುಖನಾಸಿ, ನಾಟ್ಯಗೃಹ ಮತ್ತು ರಂಗಮಂಟಪ, ಹೆಗ್ಗಪ್ಪನ ದೇವಾಲಯದ ಮುಖಮಂಟಪ ಹಾಗೂ ಮುಖ್ಯ

ದೇವಾಲಯದ ರಂಗಮಂಟಪ ಇವೆಲ್ಲ ಒಬ್ಬನೇ ವ್ಯಕ್ತಿಯಿಂದ ಎಂದರೆ ಗಂಗಣ್ಣ ಅಥವಾ ಗಂಗರಸನಿಂದ ಕ್ರಿ.ಶ. ೧೪೧೨, ೧೪೩೬ ಮತ್ತು ೧೪೪೩ನೆಯ ವರ್ಷಗಳಲ್ಲಿ ನಿರ್ಮಾಣಗೊಂಡಿರುವ ವಿಷಯ ಸ್ಪಷ್ಟಪಡುತ್ತದೆ.

ದೇವರ ಲಗ್ನ ಸಂದರ್ಭದಲ್ಲಿ ಉಪಯೋಗಿಸಲ್ಪಡುವ ಮೈಲಾರದೇವರು ಮತ್ತು ಗಂಗಿಮಾಳಮ್ಮನ ಸಂಯುಕ್ತ ಮೂರ್ತಿಯೊಂದು ದೇವಸ್ಥಾನದ ಕಾರ್ಯಾಲಯದಲ್ಲಿದೆ. ಇದರ ಪೀಠದ ಮೇಲೆ ಕ್ರಿ.ಶ. ೧೫೭೮ನೆಯ ವರ್ಷದ ಚಿಕ್ಕ ಶಾಸನವೊಂದಿದೆ. ಇದರಲ್ಲಿ 'ಹಿರಿಯ ಮೈಲಾರದೇವರು' ಎಂದು ಬಂದಿರುವ ಉಲ್ಲೇಖ ಗಮನಾರ್ಹವಾದುದು. ಈಗ ಪ್ರಸ್ತುತ ದೇವಸ್ಥಾನವನ್ನು ಎಲ್ಲೆಡೆ ಹಿರೇ ಮೈಲಾರ ಎಂದೇ ಕರೆಯಲಾಗುತ್ತಿದೆ. ಈ ಪದ್ಧತಿ ೧೬ನೆಯ ಶತಮಾನದಷ್ಟು ಮುಂಚಿನಿಂದಲೇ ಇತ್ತೆಂದು ಶಾಸನದ ಈ ಮಾತಿನಿಂದ ಸ್ಪಷ್ಟಪಡುತ್ತದೆ. ಈ ಕಾಲಕ್ಕಾಗಲೇ ಈ ದೇವರ ಹಲವಾರು ದೇವಾಲಯಗಳು ಪ್ರಸಿದ್ಧವಾಗಿದ್ದವೆಂದು ಇದರಿಂದ ಊಹಿಸಲವಕಾಶವಾಗುತ್ತದೆ.

ಈಗ್ಗೆ ಸು. ಎಂಟು ವರ್ಷಗಳ ಹಿಂದೆ ನಾನು ಈ ಲೇಖವನ್ನು ನೋಡಿದಾಗ ಅದು ಈಗಿನಷ್ಟು ಮಸುಳಿಸಿರಲಿಲ್ಲ. ಇದು ಬಹುಶಃ ಪ್ರಕಟವಾಗಿರಬಹುದೆಂದು ಭಾವಿಸಿ ಅದರ ಪ್ರತಿ ಮಾಡಿಕೊಂಡಿರಲಿಲ್ಲ. ಈಗ ನೋಡಿದರೆ '....ಸೆಟ್ಟಿಯ ಮಗ ನಕರಸಯ್ಯ ಮತ್ತು ಅವನ ಹೆಂಡತಿ ಬಸವಮ್ಮ ಇವರು ಈ ಮೂರ್ತಿಯನ್ನು ಮಾಡಿಸಿಕೊಟ್ಟರೆಂದು ಹೇಳುವ ಅಕ್ಷರಗಳು ಸ್ಪಷ್ಟವಾಗಿ ಕಂಡುಬರುತ್ತಿವೆ. ಈ ದಂಪತಿಗಳು ಹಂಪೆಯವರು ಎಂದು ತಿಳಿಸುವ ಉಲ್ಲೇಖ ಆಗ ಸ್ಪಷ್ಟವಾಗಿತ್ತೆಂದು ನನ್ನ ನೆನಪು.

ಮುಖ್ಯ ದೇವಾಲಯದ ಮುಂಬದಿಯ ಪೌಳಿಯಲ್ಲಿ ವೀರಭದ್ರನ ಗುಡಿಯಿದ್ದು ಅದರ ಎದುರುಗಡೆ ಅರಳಿಯ ಕಟ್ಟೆಯೊಂದಿದೆ. ಅದರ ಮೇಲಿನ ಶಿಲಾಲೇಖ ಈಗ ತೀರ ಸವೆದುಹೋಗಿದೆ (ಅದರ ನಡುವೆ ಕೈಯೆತ್ತಿ ನಿಂತು ದೇವರಿಗೆ ಭಕ್ತಿ ತೋರಿಸುವ ವ್ಯಕ್ತಿಯೊಬ್ಬನನ್ನು ತೋರಿಸಲಾಗಿದೆ). ಕೇವಲ 'ಶ್ರೀಮುಖ ಸಂವತ್ಸರ' ಎಂಬ ಭಾಗ ಮಾತ್ರ ಈಗ ಗೋಚರಿಸುತ್ತದೆ. ಇನ್‌ಸ್ಕ್ರಿಪ್ಶನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ ಸಂ. ೧ರ ಪ್ರಕಾರ ಈ ಪೌಳಿಯಲ್ಲಿ ಇನ್ನೊಂದು ಶಾಸನವಿತ್ತು. ಅದರಲ್ಲಿ ಹೊನ್ನರಸನೆಂಬುವನು ಶ್ರೀಮುಖ ಸಂವತ್ಸರದಂದು ಮೈಲಾರದೇವರೊಡನೆ ಐಕ್ಯನಾದನೆಂದು ತಿಳಿಸುವ ಬರಹವಿತ್ತೆಂದು ಮೇಲಿನ ಸಂಪುಟ ೧ರಲ್ಲಿ ಹೇಳಿದೆ (ಬಳ್ಳಾರಿ ಜಿ. ನಂ. ೨೧೩). ಈ ಹೊನ್ನರಸನೆಂಬುವನು ಮೈಲಾರದೇವರ ಭಕ್ತನಾಗಿದ್ದು ಸಹಜವಾದ ಮರಣವನ್ನಪ್ಪಿದನೋ ಅಥವಾ ಆತ್ಮಬಲಿದಾನ ಮಾಡಿದನೋ ತಿಳಿಯದು. ಪ್ರಸ್ತುತ ಸಂಪುಟದಲ್ಲಿ ಹೇಳಿದ ಶಾಸನ ಬಹುಶಃ ಇದೇ ಸವಕಲು ಬರಹ ಆಗಿರುವ ಸಾಧ್ಯತೆ ಹೆಚ್ಚಾಗಿದೆ.

ಈ ರೀತಿ ಹಿರೇಮೈಲಾರದಲ್ಲಿ ಈ ವರೆಗೆ ಒಟ್ಟು ನಾಲ್ಕು ಶಾಸನಗಳು ಸಿಕ್ಕು ಪ್ರಕಟವಾಗಿದ್ದು ಇದೀಗ ಮತ್ತೆ ೬ ಶಾಸನಗಳು ಹೊಸದಾಗಿ ಪ್ರಕಟವಾಗುತ್ತಿವೆ. ಅವುಗಳ ಪಾಠವನ್ನು ಕೆಳಗೆ ಕೊಡಲಾಗುತ್ತಿದೆ* :

## ಹಿರೇಮೈಲಾರದ ಶಾಸನಗಳು (ತಾ|| ಹೂವಿನ ಹಡಗಲಿ, ಜಿ|| ಬಳ್ಳಾರಿ)
## (ಮೈಲಾರದೇವರ ದೇವಾಲಯದ ಪರಿಸರ)

### ೧

ಮುಖ್ಯ ದೇವಸ್ಥಾನದ ಪೌಳಿಯ ಈಶಾನ್ಯದಿಕ್ಕಿನಲ್ಲಿ ಬಿದ್ದಿರುವ ಕಲ್ಲು, ಕ್ರಿ.ಶ.೧೪೧೨.

೧ ಸ್ವಸ್ತಿಶ್ರೀ ಜಯಾಭ್ಯುದಯ ಶಕವರುಷ ೧೩೩೪
೨ ನೆಯ ದುಂದುಭಿ ಸಂವತ್ಸರದ ಮಾರ್ಗಸಿರ
೩ ಶುದ್ಧ ೬ ಆ. ವಾರದಲ್ಲು ಶ್ರೀಮತು ಗಉತಮಗೋ
೪ [ತ್ರ]ದ ರುಕು ಶಾಖೆಯ ತ್ರಿಕಾಂಡೆಯ ನಾಗಂ
೫ ಣಗಳ ಮಕ್ಕಳು ಶ್ರೀ ಮಯಿಲಾರದೇವರ ಭಂಡಾ
೬ ರದ ಅಧಿಕಾರಿ ಗಂಗರಸರು ಮಾಡಿಸಿದ ಶ್ರೀ ಮಾ
೭ ಳಲದೇವಿಯರ ಲೀಲಾಸುಖನಾಸಿ ನಚಗ್ರುಹ ರಂಗ
೮ ಮಂಡಪಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ

### ೨

ಮುಖ್ಯ ದೇವಾಲಯದ ರಂಗಮಂಟಪದ ಮುಂಬದಿಯಲ್ಲಿನ ದಕ್ಷಿಣ ಕಂಬ. ಪೂರ್ವಮುಖದ ಶಾಸನ, ಕ್ರಿ.ಶ. ೧೪೩೬.

೧ ಶ್ರೀ ಗಣಾಧಿಪತಯೇ ನಮಃ ಶುಭಮಸ್ತು....
೨ ಯೇಣ ಕಾರಿತ ಮಹಾಪ್ರಭಾವ ವಿಧೀನಾ ನಿತ್ಯ....ಶಿ
೩ ಲಾ ಮಂಡಪಃ ಮೈಲಾರಾಖ್ಯ ಶಿವಸ್ಯ ಸಾ....
೪ ತೀನಾ ಭಕ್ತ್ಯಾ ತದೇಗ್ರಯಾ | ಶಾಕೆಬ್ದೆ ನಳ ಸ ಗೇತ್ಯ
೫ ವಸುಶ್ವರಸ್ಪಾ ...ಶಭೂ ಸಂಮಿತೇಣ ಯ....ಂತ
೬ ಸಂಪದಾ ವಿಜಯತಾಂ ಶ್ರೀಗಂಗಣಾಖ್ಯೋ
೭ ಮೈಲಾರಾಖ್ಯ ಗಿರೀಶಸ್ಯ ಗಂಗಣ ಪ್ರಭುಣಾ

---

* ೧೯೮೭ರ ಮೇ ತಿಂಗಳಿನಲ್ಲಿ ಆಯಾ ಮೂಲಗಳಿಂದ ನೇರವಾಗಿ ನಕಲು ಮಾಡಿಕೊಂಡದ್ದು. —ಲೇ.

೮ ಚಂದ್ರಾರ್ಕ್ಕಂ ಸ್ಥಿರಾ ಭೂಯಾನ್ಮಹಾ ಪ....
೯ ಶಿಲಾಬಿಮ್ಬಂ ಪಾನಿತ್ಯಂ ಪ್ರೀತೌ ಮಲ್ಲಾರಿ
೧೦ ರತಃ | ಗಂಗಣಾಮಾತ್ಯೇ ಭದ್ರಂ....ಧ್ಯಾಧೀಶ್ವ....
೧೧ ಸಂಪದಂ || ಮಂಗಳ ಮಹಾ ಶ್ರೀ ಶ್ರೀ ಶ್ರೀ

೩

ಅದೇ ರಂಗಮಂಟಪದ ಅದೇ ಕಂಬ, ಉತ್ತರ ಮುಖ, ಸು. ಕ್ರಿ.ಶ. ೧೪೩೬.

೧ ಶ್ರೀ ಶಾರದಾಯ್ಯೆನಮಃ ಆದೀಪ್ನುಮಸ್ತುಃ | ತುಂಗಭದ್ರಾ
೨ ಸಮೀಪಸ್ಯ ಮ್ಯೆಲಾರ ಪಳ(ತ?) ಮೇಶಿತುಃ ಪುರತೋಗಂಗಣ್ಣಾ
೩ ಖ್ಯೇನೇ....ರಂಗಮಂಡಪಯಾ? ಚಿತ್ರತೋರಣ ಸಂ
೪ ಯುಕ್ತಂ ಚತುಸ್ತಂಭ ವಿರಾಜಿತಂ || ವಾತಾಯನೇನ ರಚಿ
೫ ತಂ ಮಂಟಪಂ ಗುಣಶೋಭಿತಂ || ನಾನಾ ರತ್ನಪ್ರತೀಕಾ
೬ ಶಂ ನಾನಾ ಶೋಭಾಭಿರಂಜಿತಂ || ನಾನಾ ವರ್ಣತೌ ರಾಮಾ
೭ ದ್ಯಂ ಮಂಡಪಂ ಭುವಿವಿಸ್ತರಂ || ನಾನಾ ಚಿತ್ರವಿಭೂ
೮ ಶಿತ್ಯಂ | ದೀಪಿತಂ ಮಣಿರಶ್ಮಯಾ । ಸರ್ವ್ವಾಲಂಕಾ
೯ ....ತಂ ಮಂಡಪಂ ಧರಣೀ ತಳೇ || ತಚ್ಚಿತ್ರಕರ್ಮ
೧೦ ಕೌತು ಸ್ನೋ ಮಾಲಚೀಪತಿರೀಶ್ವರ ಮ್ಯೆಲಾರೇತಿ ಪ್ರಸಿ
೧೧ ದ್ಧೋಯಂ ಪಾತುವಃಶ್ಚಂದ್ರಸೇಖರಃ || ಶ್ರೀ ಶ್ರೀ

೪

ಅದೇ ದೇವಾಲಯದ ರಂಗಮಂಟಪದ ಉತ್ತರ ಬದಿಯ ಕಂಬದ ಮೇಲಿರುವ ಶಾಸನ, ಕ್ರಿ.ಶ. ೧೪೩೬.

೧ ಸ್ವಸ್ತಿಶ್ರೀ ಜಯಾಭ್ಯುದಯ ಶಕವರುಶ
೨ ೧೩೫೮ನೆಯ ನಳಸಂವತ್ಸರದ ವಯಿಶಾ
೩ ಖ(ಖಿ)೧೧ದಲ್ಲು ಶ್ರೀಮದ್ದೇವತಾ ಚಕ್ರವರ್ತ್ತಿ ಉಂಗು
೪ ಲಾಲದ ಶ್ರೀಮನ್ಮಹಾಮಯಿಲಾರ ದೇವರ ರಂಗಮ
೫ ಂಟಪವನ್ನು ಶ್ರೀಮದ್ರಾಜಾಧಿರಾಜ ಪರಮೇಶ್ವರ
೬ ಪೂರ್ವ ದಕ್ಷಿಣ ಪಶ್ಚಿಮ ಸಮುದ್ರಾಧೀಶ್ವರಂ ಅರಿರಾಯ
೭ ವಿಭಾಡ ಗಜವೇಂಟೆಕಾಱ ಶ್ರೀ ವೀರ ಪ್ರತಾಪ ಪ್ರಉಢದೇವ
೮ ರಾಯ ಮಹಾರಾಯರ ಶ್ರೀಮನ್ಮಹಾಪ್ರಧಾನಂ
೯ ಸಿಂಗಣ್ಣ ದಂಣ್ನಾಯಕಂ ಒಡೆಯ ನಿರೋಪದಿಂ

೧೦ [ಗೌ]ತಮ ಗೋತ್ರ ರುಕು ಶಾಖೆಯ ತ್ರಿಕಾಂಡಿಯ ನಾಗ
೧೧ ಪಯ್ಯನ ಮಕ್ಕಳು ಹೆಗ್ಗಡೆದೇವರಸರ ತಮ್ಮಂದಿರು ಶ್ರೀ
೧೨ ಮೆಯಿಲಾರ ದೇವರ ನಿಜ ಭಕ್ತರಾದ ಅಧಿಕಾರಿ ಗಂಗರ್‍ಸ
೧೩ ರು ಮಾಡಿಸ್ಸಿದ ಶಿಲಾರಂಗಮಂಟಪಕ್ಕೆ ಮಂಗಳ ಮಹಾಶ್ರೀ
೧೪ ಶ್ರೀ ಶ್ರೀ........

ಕೆಳಗೆ ಮುಂದುವರಿದ ಭಾಗ

೧೫ ಮೈಲಾರಪುರದ ಶ್ರೀಮನ್ಗಂಗಣ್ಣನಾಗ
೧೬ ಶ್ವ........ತಮಾರ್ಸಯಃ
೧೭ ಶಿಪಂ ? ತತ್ಪುಣ್ಯ ಸುಫಲಾತ್ರ್‍ಸಸಿ
೧೮ ಗ್ಯ—.....ಪ್ರಪಿತಾಂ ಭಾ
೧೯ ಯಾದ್ದೇವಣಾನುಜಃ

೫

ಮುಖ್ಯ ದೇವಾಲಯದ ಪೌಳಿಯ ಹೊರಗಡೆ ಹೆಗ್ಗಪ್ಪದೇವರ ಗುಡಿಯ ರಂಗ ಮಂಟಪದ ಪೂರ್ವ ತೊಲೆಯ ಮೇಲಿನ ಶಾಸನ, ಕ್ರಿ.ಶ. ೧೪೪೩.

೧ ಸ್ವಸ್ತಿಶ್ರೀ ಜಯಾಭ್ಯುದಯ ಶಕವರುಷ ೧೩೬೫ನೆಯ ರುಧಿ
೨ ರೋದ್ಗಾರಿ ಸಂವತ್ಸರ ಮಾರ್ಗಸುದ್ಧ ೬ ಬು. ದಲು ಗಉತಮ
೩ ಗೋತ್ರದ ರುಕುಶಾಖೆಯ ತ್ರಿಕಾಂಡೆಯ ನಾಗಂಣಗಳ ಮಕ್ಕಳು
೪ ಶ್ರೀ ಮಯಿಲಾರ ದೇವರ ಭಂಡಾರದ ಅಧಿಕಾರಿ ಗಂಗಯ್ಯ
೫ ನು ಮಾಡಿಸಿದ ಶ್ರೀ ಹೆಗ್ಗಡೆ ದೇವರ ಶಿಲಾಮಂಟಪ ಮಂಗಳ
೬ ಮಹಾ ಶ್ರೀ ಶ್ರೀ ಶ್ರೀ

೬

ಮುಖ್ಯ ದೇವಾಲಯದ ಪೌಳಿಯಲ್ಲಿಯ ಕಲ್ಯಾಣಮಂಟಪದಲ್ಲಿ ಇಟ್ಟಿರುವ ಮೈಲಾರ – ಮಾಳಮ್ಮ ವಿಗ್ರಹದ ಅಡಿಯಲ್ಲಿರುವ ಶಾಸನ, ಕ್ರಿ.ಶ. ೧೫೧೪.

೧ ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೪೪೦ನೆಯ ಬಹುಧಾನ್ಯ ಸಂವತ್ತ್ಸರದ ಮಾರ್ಗಶೀರ್ಷಶು........
೨ ಶ್ರೀಮತು ಹಿರಿಯ ಮೈಲಾರ ದೇವಂಗೆ ವುತ್ತ್ಸವ |........
........ಮಂ ನ ಚಿಂನದ....ದಿಕ ಭೂಷಣ ವಿಜಯ
ಯಾದ ಪಹ ?

೩. (ಮೂರ್ತಿಯ ಹಿಮ್ಮಗ್ಗಲು)
........ಸೆಟ್ಟಿಯ ಮಗ ನಕರಸಯ್ಯ ಆತನ
ಹೆಂಡತಿ ಬಸವಮ್ಮಗಳು ಯಿಬ್ಬರು ಮಾಡಿಸಿದ | ಶ್ರೀ ಶ್ರೀ ಶ್ರೀ

೭

ಪೌಳಿಯ ಪೂರ್ವ ಭಾಗದಲ್ಲಿರುವ ವೀರಭದ್ರದೇವರ ಗುಡಿಯ ಮುಂದಿರುವ ಕಲ್ಲು (ಬಹಳ ಸವೆದಿದೆ).

......................
......................
......................
......................
......................
......................
......................
ಶ್ರೀ ಮುಖ
ಸಂವತ್ಸರದ....

# ಶಾಸನಗಳ ಬೆಂಮತ್ತನೂರನಾಡು : ಚಿತ್ರದುರ್ಗ

## —ಒಂದು ಪರಿಶೀಲನೆ

ಪಿ. ವಿ. ಕೃಷ್ಣಮೂರ್ತಿ

ಕರ್ನಾಟಕದ ಇತಿಹಾಸದ ಮಧ್ಯಕಾಲಿನ ಅವಧಿಗೆ ಸೇರಿದ್ದ ಒಂದು ಆಡಳಿತ ವಿಭಾಗವೇ 'ಬೆಂಮತ್ತನೂರು ನಾಡು'. ಕ್ರಿ. ಶ. ೧೨ನೇ ಶತಮಾನದ ಮಧ್ಯಭಾಗದಲ್ಲಿ, ಕಲ್ಯಾಣ ಚಾಳುಕ್ಯರ ಕೊನೆಕೊನೆಯ ಕಾಲದಲ್ಲಿ ಅವರ ಸಾಮ್ರಾಜ್ಯದ ದಕ್ಷಿಣ ಭಾಗದ ನೊಳಂಬವಾಡಿ ಮೂವತ್ತೆರಡು ಸಾವಿರ ಪ್ರದೇಶಕ್ಕೆ ಸೇರಿದ್ದ ಪದುವಗರೆ-೫೦೦ ಅಥವಾ ಹಡುವಗೆಱೆ-೫೦೦, ಅರಹಟ-೧೨ ಮತ್ತು ಜಗಳಪುರ-೭೦ ಎಂಬ ಪ್ರದೇಶಗಳನ್ನು ಅವರ ಮಹಾಸಾಮಂತರೇ ಮೊದಲಾದ ಅಧಿಕಾರಿಗಳು ಈ ಬೆಮ್ಮಚನೂರ ನೆಲೆವೀಡಿನಿಂದ ಆಳುತ್ತಿದ್ದರು.[1] ಬೆಂಮತ್ತನೂರು (ಬೆಮ್ಮಚನೂರು) ಆ ಕಾಲಕ್ಕಾಗಲೇ ತನ್ನ ಸ್ವಾಭಾವಿಕ ನೈಸರ್ಗಿಕ ಪರಿಸರದ ಪ್ರಭಾವದಿಂದ ಒಂದು ಪ್ರಮುಖ ನೆಲೆವೀಡಾಗಿ ರೂಪಾಂತರವಾಗತೊಡಗಿತ್ತು. ಇದಕ್ಕೂ ಪೂರ್ವದಲ್ಲಿ ಬೆಂಮತ್ತೂರಿನ ಉಲ್ಲೇಖ ಶಾಸನಗಳಲ್ಲಿ ಕಂಡುಬರುವುದಿಲ್ಲ. ಆದರೆ ಈ ಪ್ರದೇಶದ ಶಾಸನಗಳಲ್ಲಿ ಸುಟ್ಗಲ್, ಸೂಳುಂಗಲ್, ಸೂಳ್ಗಲ್ ಮತ್ತು ಚೂಳುಂಗಲ್ ಎಂಬ ಪ್ರಯೋಗಗಳು ದೊರೆಯುತ್ತವೆ. ಕ್ರಿ. ಶ. ೧೧೨೩ರ ಗಾರೆಹಟ್ಟಿ ಗ್ರಾಮದ ಶಾಸನದಲ್ಲಿ "ಹಡುವಗರೆ ಐನೂಱಱೊಳಗಣ ಕಂಪಣಂ ಚೂಳುಂಗಲ್ಲು ಎಳ್ಪತ್ತಱ ಬಳಿಯ ಬಾಡಂ ನಿಡುಗುಱುತೆ ಒನ್ದುಮಂ"[2] ಎಂಬ ಉಲ್ಲೇಖವಿರುವುದು ಕಂಡುಬರುತ್ತದೆ. ಇಲ್ಲಿ ಉಕ್ತವಾಗಿರುವ ನಿಡುಗಱುತೆ ಎಂಬ ಸ್ಥಳದ ಸನಿಹದಲ್ಲೆ—ಚೂಳುಂಗಲ್ಲು ಎಂಬ ಸ್ಥಳವಿದ್ದಿತ್ತೆಂಬುದು ಸ್ಪಷ್ಟವಾಗುತ್ತದೆ. ಬೆಂಮತ್ತೂರು / ಬೆಂಮುಚನೂರು

---

1 ಎಪಿಗ್ರಾಫಿಯ ಕರ್ನಾಟಕ, ಸಂಪುಟ ೧೧, ಚಿತ್ರದುರ್ಗ ೩೪ (ಕ್ರಿ.ಶ. ೧೧೨೩) ಮತ್ತು ಚಿತ್ರದುರ್ಗ ೩೩ (ಕ್ರಿ.ಶ. ೧೧೮೭)

2 ಅದೇ, ಚಿತ್ರದುರ್ಗ ೩೪

ಎಂಬುದು ಸುಟ್ಟಿಗಲ್ನಾಡು,[3] ಸೂಳುಂಗಲೆಪ್ಪತ್ತು,[4] ಸೂಳ್ಗಲ್ಲೆಪ್ಪತ್ತು,[5] ಚೂಳುಂಗಲ್-೭೦[6] ಎಂದು ಮುಂತಾಗಿ ಶಾಸನೋಕ್ತವಾಗಿರುವ ಪ್ರಾದೇಶಿಕ ವಿಭಾಗದ ಒಂದು ನೆಲೆವೀಡಾಗಿರುವದು[7] ಕಂಡುಬರುತ್ತದೆ. ಹೀಗೆ ೧೧ನೇ ಶತಮಾನಕ್ಕಿಂತ ಹಿಂದೆ ಪ್ರಾಯಶಃ ಒಂದು ಸಣ್ಣ ಗ್ರಾಮವಾಗಿದ್ದ ಬೆಂಮತ್ತಸೂರು ಕಾಲಾಂತರದಲ್ಲಿ ಬೆಳೆದು ಅನೇಕ ರೀತಿಯ ಬಾಹ್ಯ ಮತ್ತು ಆಂತರಿಕ ಪ್ರಭಾವಗಳ ಹಿನ್ನೆಲೆಯಲ್ಲಿ ತನ್ನ ಹೆಸರನ್ನು ಬದಲಿಸುತ್ತಾ ಬಂದು ಇಂದಿನ ಕರ್ನಾಟಕದ ಒಂದು ಮುಖ್ಯ ಪಟ್ಟಣವಾಗಿ 'ಚಿತ್ರದುರ್ಗ' ಎಂಬ ಹೆಸರಿನಿಂದ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಪ್ರಸಿದ್ಧವಾಗಿದೆ.

ಕ್ರಿ. ಶ. ಸುಮಾರು ೧೨೧೦ರ ವೇಳೆಗೆ ಈ ಪ್ರದೇಶ ಹೊಯ್ಸಳ ವೀರಬಲ್ಲಾಳನ ಕೈವಶವಾಗಿ ಅವರ ದಂಡನಾಯಕರೇ ಮೊದಲಾದವರ ನೆಲೆವೀಡಾಗಿಯೂ[8] ಮುಂದು ವರೆದುದಲ್ಲದೆ ವರ್ತಕರೇ ಮುಂತಾದ ನಖರ ವರ್ಗಗಳಿಂದ ಕೂಡಿದ 'ಬೆಂಮ್ಮತೂರ ಪಟ್ಟಣ'ವೆಂಬ[9] ಅಭಿದಾನವನ್ನು ಪಡೆದುಕೊಂಡು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಹೊಯ್ಸಳ ಸಾಮ್ರಾಜ್ಯದ ಉತ್ತರ ಗಡಿಯ ಒಂದು ಮುಖ್ಯವಾದ ಮತ್ತು ದುರ್ಗಮವಾದ ದುರ್ಗವಾಗಿ ರೂಪತಾಳತೊಡಗಿತು.[10] ಕ್ರಿ. ಶ. ಹನ್ನೊಂದ ನೆಯ ಶತಮಾನಕ್ಕೆ ಸೇರಿದ ಶಾಸನವೊಂದು[11] ಇಲ್ಲಿ ಕೋಟೆಯು ನಿರ್ಮಾಣ ವಾಗಿದ್ದುದರ ಬಗ್ಗೆ ಸುಳಿವು ನೀಡುತ್ತದೆಯಾದರೂ, ಕ್ರಿ. ಶ. ೧೨೫೪ರ ಶಾಸನವು ಮೊದಲ ಬಾರಿಗೆ 'ಬೆಮ್ಮತ್ತನೂರದುರ್ಗ'[12] ಎಂಬ ಸ್ಪಷ್ಟ ಉಲ್ಲೇಖವನ್ನು ನೀಡು ತ್ತದೆ. ಸುಮಾರು ಕ್ರಿ. ಶ. ೧೩ನೇ ಶತಮಾನದ ಹೊತ್ತಿಗೆ ಅದು ಒಂದು ಸ್ವತಂತ್ರ ಪ್ರಾದೇಶಿಕ ವಿಭಾಗದ ಕೇಂದ್ರ ಸ್ಥಳವಾಗಿ ನಾಡಿನ ರೂಪವನ್ನು ತಾಳಿತ್ತೆನ್ನಬಹುದು. ಬೆಮತೂರ ನಾಡನ್ನು ಉಲ್ಲೇಖಿಸುವ ಹೊಯ್ಸಳರ ಶಾಸನಗಳು ಇಂದಿನ ಚಿತ್ರದುರ್ಗ[13] ಮತ್ತು ಹುಲಿಗೊಂದಿ[14] ಸ್ಥಳಗಳಲ್ಲೂ, ಬೆಂಮತ್ತನಕಲ್ಲನಾಡು[15]

---

3 ಎಪಿಗ್ರಾಫಿಯಾ ಕರ್ನಾಟಕ, ಚಿತ್ರದುರ್ಗ ೨೪, (ಸು. ಕ್ರಿ.ಶ. ೫೦೦ ?)
4 ಅದೇ, ೭೮ (೧೦೬೦)
5 ಅದೇ, ೮೨ (೧೦೭೪)
6 ಅದೇ, ೩೪
7 ಅದೇ
8 ಅದೇ, ಹೊಳಲಕೆರೆ ೨ (೧೨೧೪)
9 (i) ಅದೇ, ಮತ್ತು (ii) ಅದೇ ಚಿತ್ರದುರ್ಗ ೧೨ (೧೨೮೬)
10 ಅದೇ, ಜಗಳೂರು ೩೩ (೧೨೩೫)
11 ಅದೇ, ಚಿತ್ರದುರ್ಗ, ೮೨
12 ಅದೇ, ಜಗಳೂರು ೩೩ : ಬೆಂಮತ್ತನೂರ ದುರ್ಗ
13 ಅದೇ, ಚಿತ್ರದುರ್ಗ ೬ (೧೩೩೮)
14 ಮೈಸೂರು ಪುರಾತತ್ವ ವಾರ್ಷಿಕ ವರದಿ (MAR) ೧೯೨೯
15 ಎ.ಕ. ೧೧, ಚಿತ್ರದುರ್ಗ ೨ (೧೩೫೫)

ಬೆಂಮತರಕಲ್ಲು ಸೀಮೆ[16] ಎಂಬ ಉಲ್ಲೆಖಗಳನ್ನೊಳಗೊಂಡ ವಿಜಯನಗರದ ಅರಸರ ಕಾಲದ ಶಾಸನಗಳು ಚಿತ್ರದುರ್ಗ ಮತ್ತು ಗುಂಟನೂರು ಸ್ಥಳಗಳಲ್ಲಿಯೂ ಕಂಡು ಬಂದಿರುತ್ತವೆ.

ವಿಜಯನಗರದ ಅರಸರ ನಂತರದಲ್ಲಿ ಈ ನಾಡಿನ ಉಲ್ಲೇಖ ಕಂಡುಬರುವುದಿಲ್ಲ. ಆದರೆ ಸುಮಾರು ೧೫೦ ವರ್ಷಗಳ ತರುವಾಯ ಅಂದರೆ ಕ್ರಿ. ಶ. ೧೬೯೮ರ ಸುಮಾರಿಗೆ ಪಾಳೆಯಗಾರರ ಕಾಲದಲ್ಲಿ ಚಿಂನ್ಮನಗಿರಿದುರ್ಗ[17] ಮತ್ತು ಅದರ ಅಪಭ್ರಂಶ ರೂಪಗಳಾದ ಶಿಂಗನ ಗಿರಿದುರ್ಗ[18] ಚಿಂನನ ಗಿರಿದುರ್ಗ[19] ಎಂಬ ಕಾವ್ಯಾತ್ಮಕವಾದ, ಪ್ರಾಯಶಃ ಬೇರೊಂದು ಮೂಲದಿಂದ ಮೂಡಿಬಂದ ಹೆಸರುಗಳು ಸುಮಾರು ೨೦-೨೫ ವರ್ಷಗಳ ಕಾಲ ಶಾಸನಗಳಲ್ಲಿ ಬಳಕೆಯಲ್ಲಿದ್ದುದು ಕಂಡು ಬರುತ್ತದೆ. ಆ ನಂತರದಲ್ಲಿ 'ದುರ್ಗದ ಸೀಮೆ',[20] ಚಿ|ದುರ್ಗ,[21] ಚಿತ್ರಕಲ್ಲುದುಗ್ಗ[22] ಎಂಬ ಪ್ರಯೋಗಗಳು ಹದಿನೆಂಟನೆಯ ಶತಮಾನದ ಎಂಟನೆಯ ದಶಕದವರೆಗೂ ಪ್ರಚಲಿತವಿದ್ದ ಅಂಶ ಶಾಸನಗಳನ್ನು ಕಾಲಾನುಕ್ರಮಣಿಕೆಯಲ್ಲಿ ಅವಲೋಕಿಸಿದರೆ ಸ್ಪಷ್ಟಪಡುತ್ತದೆ.

ಇಲ್ಲಿ ನಾವು ಗಮನಿಸಬೇಕಾಗಿರುವುದು ; ಬೆಂಮತ್ತನೂರು, ಬೆಂಮತ್ತೂರು ಬೆಂಮತ್ತಕಲ್ಲು, ಬೆಂಮತ್ತೂರಕಲ್ಲು, ಬೆಂಮತರಕಲ್ಲು ಎಂಬ ಪಾಳೆಯಗಾರರ ಪೂರ್ವದ ಉಲ್ಲೇಖಗಳಲ್ಲಿ ಸಾಮಾನ್ಯಾಂಶವಾಗಿರುವ 'ಬೆಂಮತ್ತು' ಎಂಬ ಪದವನ್ನು ; ಪಾಳೆಯಗಾರರ ಮತ್ತು ನಂತರದ ಕಾಲದಲ್ಲಿನ ಚಿಂನ್ಮನಗಿರಿದುರ್ಗ, ಶಿಂಗನಗಿರಿದುರ್ಗ, ಚಿಂನನಗಿರಿದುರ್ಗ, ದುರ್ಗದಸೀಮೆ, ಚಿ|ದುರ್ಗ, ಚಿತ್ರಕಲ್ ದುರ್ಗ ಎಂಬ ಉಲ್ಲೇಖಗಳಲ್ಲಿ ಈ 'ಬೆಂಮತ್ತು' ಎಂಬುದು ಸ್ಥಾನ ಪಡೆದಿಲ್ಲ.

ಪಾಳೆಯಗಾರರ ಪೂರ್ವಕಾಲಕ್ಕೆ ಸೇರಿದ ಈ ಸಂಬಂಧದ ಉಲ್ಲೆಖಗಳಲ್ಲಿ ಬೆಂಮ್ಮತ್ತೂರಿನ ಪ್ರಾರಂಭದ ಅಕ್ಷರವಾದ 'ಬೆ'ಕಾರದ ಅನೇಕ ಪ್ರಯೋಗಗಳ ಜೊತೆಗೆ 'ಬಿ', 'ಭಿ' ಮತ್ತು 'ಚಿ' ಕಾರಗಳಿಂದ ಪ್ರಾರಂಭವಾಗುವ ತಲಾ ಒಂದೆರಡು ಪ್ರಯೋಗಗಳು ಪ್ರಕಟಿತ ಶಾಸನಗಳಲ್ಲಿ ಉಕ್ತವಾಗಿದ್ದು, ಇವೂ ಕೂಡ ಶಾಸನಗಳ ತೃಟಿತ ಸ್ವರೂಪದಿಂದ ವಾಸ್ತವವಾಗಿ ಇರುವ 'ಬೆ'ಕಾರಕ್ಕೆ ಬದಲಾಗಿ, ತಪ್ಪಾಗಿ ಓದಿರಬಹುದಾದ ಅಪಪಾಠಗಳೇ ಆಗಿವೆಯೆಂದು ದೃಢವಾಗಿ ಹೇಳಬಹುದಾಗಿದೆ.

---

16 ಎ.ಕ. ೧೧, ಚಿತ್ರದುರ್ಗ ೪೫ (೧೫೩೮)
17 ಅದೇ, ದಾವಣಗೆರೆ ೧೬೪
18 ಅದೇ, ಚಿತ್ರದುರ್ಗ ೩೭ (೧೭೦೦ ?)
19 ಅದೇ, ೩೧ (೧೭೧೪ ?)
20 ಅದೇ, ೫೬ (೧೭೧೮)
21 ಅದೇ, ೫೪ (೧೭೩೦)
22 ಅದೇ, ೨೧ (೧೭೮೧)

ಆದರೆ ವಿದ್ವಾಂಸರು, ಈ ಅಕ್ಷರವು 'ಬೆ' ಅಲ್ಲ ಅದು ಮೂಲತಃ ಇರುವ 'ಚೆ'ಕಾರವನ್ನು ಶಾಸನ ತಜ್ಞರು 'ಬೆ'ಕಾರವೆಂದು ತಪ್ಪಾಗಿ ಓದಿ ಶಾಸನ ಪಾಠಗಳನ್ನು ಪ್ರಕಟಿಸಿರುತ್ತಾರೆ ಎಂಬ ನಿಲುವನ್ನು ತಳೆದಿರುವುದು ಕಂಡುಬರುತ್ತದೆ[23].

ಕನ್ನಡ ಲಿಪಿಗಳ ಬೆಳವಣಿಗೆಯ ಕ್ರಮವನ್ನು ಪರಿಶೀಲಿಸಿದರೆ, ಕ್ರಿ. ಶ. ಸುಮಾರು ೧೨ನೇ ಶತಮಾನಕ್ಕಿಂತ ಹಿಂದಿನ ಶಾಸನಗಳಲ್ಲಿ 'ಚೆ' ಮತ್ತು 'ಬೆ' ಅಕ್ಷರಗಳನ್ನು ಕಿಂಚಿತ್ತೂ ಸಂಶಯಕ್ಕೆಡೆಯಿಲ್ಲದಂತೆ ಗುರುತಿಸಬಹುದು. ಆದರೆ ಇದೇ ಮಾತನ್ನು ಕ್ರಿ. ಶ. ಸು. ೧೨೬೦ ರಿಂದ ೧೩೬೦ ಅವಧಿಯ ಸುಮಾರು ಒಂದು ನೂರು ವರ್ಷಗಳ ಪರಿಧಿಯಲ್ಲಿನ ಶಾಸನಗಳ ಸಂ ಅಕ್ಷರಗಳಿಗೆ ಅನ್ವಯಿಸುವುದು ತುಸು ಕಷ್ಟ. ಅಂದರೆ ಹೊಯ್ಸಳರ ಕೊನೆಯ ಕಾಲ ಮತ್ತು ವಿಜಯನಗರದ ಪ್ರಾರಂಭ ಕಾಲದ 'ಬಿ' 'ಚಿ' ಹಾಗೂ 'ಬೆ' 'ಚೆ'ಗಳನ್ನು ಖಚಿತವಾಗಿ ಬೇರ್ಪಡಿಸುವುದು ಕಷ್ಟಸಾಧ್ಯ. ಇದಕ್ಕೆ ಕಾರಣವಿಷ್ಟೇ; ಈ ಅವಧಿಯ ಅಕ್ಷರಗಳಲ್ಲಿ 'ಎ' ಕಾರವನ್ನು ಬರೆಯುವ ರೀತಿ ಹಿಂದೆ ಇದ್ದುದಕ್ಕಿಂತ ಬೇರೆಯಾದುದೇ ಆಗಿದೆ. ಈ ಅಂಶವನ್ನು ಇದೇ ಲೇಖನದ ೨೩ನೇ ಅಡಿಟಿಪ್ಪಣಿಯಲ್ಲಿ ಸೂಚಿಸಿರುವ ಶ್ರೀ ಬಿ. ರಾಜಶೇಖರಪ್ಪನವರ ಲೇಖನದ ಪುಟ ೯೫ರಲ್ಲಿ ಕೊಟ್ಟಿರುವ "ಬಿ–ಭಿ ಬೆ–ಚೆ ಅಕ್ಷರಗಳ ಲಿಪಿ ವಿನ್ಯಾಸ ನಕ್ಷೆ"ಯಿಂದಲೂ ದೃಢಪಡಿಸಿಕೊಳ್ಳಬಹುದಾಗಿದೆ. ಈ ಕಾರಣದಿಂದಲೇ ಮುಂದಿನ ಅವಧಿಯಲ್ಲಿ ಬಕಾರ ಮತ್ತು ಚಕಾರಗಳನ್ನು ಸ್ಪಷ್ಟಪಡಿಸುವ ಸಲುವಾಗಿ ಚಕಾರವನ್ನು ಬರೆಯುವಾಗ ತಲೆಕಟ್ಟಿಗೆ ಮುನ್ನ ಅಂದರೆ ತಲೆಕಟ್ಟಿನ ಕೆಳಭಾಗದಲ್ಲಿ ಒಂದು ಅಡ್ಡಗೆರೆಯನ್ನು ಹಾಕಲು ಪ್ರಾರಂಭಿಸಿದರೆಂದು ಹೇಳಬಹುದಾಗಿದೆ. ಇಂದಿಗೂ ಈ ಕ್ರಿಯೆ ನಮ್ಮ ಬರವಣಿಗೆ ಹಾಗೂ ಮುದ್ರಣಗಳಲ್ಲಿ ಮುದುವರೆದಿರುವುದು ಸರಿಯಷ್ಟೆ. ಪ್ರಸ್ತುತ ಚಿತ್ರದುರ್ಗ ಸ್ಥಳದಲ್ಲಿರುವ ಈ ಸಂಬಂಧದ ಶಾಸನಗಳೆಲ್ಲವು[24] ಕ್ರಿ. ಶ. ೧೨೮೬ರ ನಂತರದ ಕಾಲಕ್ಕೆ ಸೇರಿದವು ಎಂಬುದನ್ನು ಕೂಡ ನಾವು ಇಲ್ಲಿ ಗಮನಿಸಬೇಕಾದ ಅಂಶ, ಏಕೆಂದರೆ ವಿದ್ವಾಂಸರು ಇಲ್ಲಿನ ಶಾಸನಗಳನ್ನಷ್ಟೇ ಗಮನಿಸಿ ಮೇಲಿನಂತೆ ಆತುರದ ಅಭಿಪ್ರಾಯಕ್ಕೆ ಬಂದಿರಲಿಕ್ಕೂ ಸಾಕು. ಅಂದರೆ ಕ್ರಿ. ಶ. ಸು. ೧೨೬೦ಕ್ಕಿಂತ ಹಿಂದಿನ ಮತ್ತು

---

23 (i) ಬಿ. ರಾಜಶೇಖರಪ್ಪ : ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಥಮಾಕ್ಷರ 'ಬೆ' ಅಲ್ಲ 'ಚೆ'—ಸಾಧನೆ (೧೬–೪) ಪುಟ ೯೧–೯೮

(ii) ಡಾ॥ ಎಂ.ಎಂ. ಕಲಬುರ್ಗಿ : ವಿಜಾಪುರದ ನಾಗಚಂದ್ರನ ಮಲ್ಲಿನಾಥ ಬಸದಿ ಹಾಗೂ ಚಿತ್ರದುರ್ಗದ ಪ್ರಾಚೀನ ಹೆಸರು : ಎರಡು ಟಿಪ್ಪಣಿಗಳು, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (೬೦–೧) ಪುಟ. ೧೦೫–೧೧೦.

(iii) ಡಾ। ಎಂ.ಎಂ. ಕಲಬುರ್ಗಿ: ಚಿತ್ರದುರ್ಗದ ಪ್ರಾಚೀನ ಹೆಸರು, ಮಾರ್ಗ ಸಂಪುಟ ೨, ಪು. ೧೮೩–೮೭, ಬೆಂಗಳೂರು (೧೯೮೮)

24 ಎ. ಕ. ೧೧, ಚಿತ್ರದುರ್ಗ ೧೨, ೧, ೪, ೬, ೨, ೩, ೧೪, ೨೧

ಕ್ರಿ. ಶ.ಸು. ೧೫೬೦ರ ನಂತರದ ಶಾಸನಗಳಲ್ಲಿನ ಈ ಅಕ್ಷರಗಳನ್ನು ಅವು ತ್ರುಟಿತ ಸ್ವರೂಪವಲ್ಲದಿದ್ದ ಪಕ್ಷದಲ್ಲಿ ಚಿ ಎಂಬುದನ್ನು ಬೆ ಎಂದಾಗಲೀ ಬೆ ಎಂಬುದನ್ನು ಚಿ ಎಂದಾಗಲೀ ಓದಲಿಕ್ಕೆ ಸಾಧ್ಯವಿಲ್ಲ.

ಒಟ್ಟಾರೆ ಪಾಳೆಯಗಾರರ ಆಳಿಕೆಗೆ ಪೂರ್ವದಲ್ಲಿನ ಈ ಸಂಬಂಧದ ಶಾಸನಗಳಲ್ಲಿನ ಸದರಿ ಉಲ್ಲೇಖಗಳು 'ಚಿ'ಕಾರದಿಂದ ಕೂಡಿರುವುದಿಲ್ಲವೆಂಬುದಂತು ಖಂಡಿತ ಹಾಗೆಯೇ ಇದು 'ಬೆ'ಕಾರವೇ ಆಗಿದೆ ಎಂಬುದು ಕೂಡ ದೃಢವಾದ ಅಂಶ.

ಇಲ್ಲಿಯೇ ಕನ್ನಡ ಹಸ್ತಪ್ರತಿಗಳ ಲಿಪಿಗಳನ್ನು ಗಮನಿಸಬೇಕಾಗುತ್ತದೆ. ನಮಗೆ ದೊರೆತಿರುವ ಬಹಳಷ್ಟು ಹಸ್ತಪ್ರತಿಗಳು ೧೪-೧೫ನೇ ಶತಮಾನದ ನಂತರದವಾಗಿವೆ. ಅಲ್ಲಿ ಅನೇಕ ಕಡೆ ಬಿ, ಚೆ, ಚಿ, ಬೆ ಗಳು ಪರಸ್ಪರ ಪಾಠಾಂತರಗಳಿಗೆ ಗುರಿಯಾಗಿರುವುದನ್ನು ಗಮನಿಸಬಹುದು.[25] ಉದಾಹರಣೆಗೆ ಶಾಸನಗಳ ಚೀಲಾಳ-ಬೇಲಾಳ (ಚೌಡದಾನಪುರ ಶಾಸನ), ಸಬ್ಬಿಸಾಸಿರ-ಬಚ್ಚಿಸಾಸಿರ, ಭಟ್ಟವೃತ್ತಿ-ಚಟ್ಟವೃತಿ ಮುಂತಾದವು.

ಒಟ್ಟಾರೆ 'ಬೆಂಮತ್ತೂರು' ಎಂಬುದೇ ಈ ಊರಿನ ಮೂಲ ರೂಪವಾಗಿದ್ದಿತೆಂದು ಈ ಮೇಲಿನ ನಿದರ್ಶನಗಳಿಂದ ಸಿದ್ಧಪಡುತ್ತದೆ.

ಸ್ಥಳನಾಮಗಳನ್ನು ಸ್ಥೂಲವಾಗಿ (i) ಪ್ರಾಕೃತಿಕ ಸ್ವಭಾವದ ಅಥವಾ ಗುಣ ಲಕ್ಷಣಗಳಿಂದ ನಿಷ್ಪನ್ನವಾದ ಸ್ವಾಭಾವಿಕ ನಾಮಗಳು ಮತ್ತು (ii) ಸಂಸ್ಕೃತಿಯನ್ನು ಪ್ರತಿಬಿಂಬಿಸುವ ನಾಮಗಳು ಎಂಬ ಎರಡು ಸ್ಥೂಲ ವಿಭಾಗಗಳಲ್ಲಿ ಗುರುತಿಸಬಹುದು. ಕೆಲವು ಸ್ಥಳನಾಮಗಳು ಒಂದು ಪ್ರಕೃತಿ ವೈಚಿತ್ರ್ಯ, ನಿರ್ದಿಷ್ಟಗುರುತು, ಎಡೆ, ಮುಂತಾದುವುಗಳನ್ನು ನಿರೂಪಿಸುವ ವಿವರಣಾತ್ಮಕ ನಾಮಗಳಾಗಿವೆ. ಇವು ಸಾಮಾನ್ಯವಾಗಿ ಸ್ಥಳೀಯ ಭಾಷೆಯ ಮೂಲದಿಂದ ಹುಟ್ಟಿದವವಾದರೂ ಕೆಲವೊಮ್ಮೆ ಇವುಗಳ ಮೂಲವನ್ನು ಇನ್ನೂ ಹಿಂದಕ್ಕೆ ಅಂದರೆ ದಕ್ಷಿಣ ಭಾರತದ ಸ್ಥಳನಾಮಗಳನ್ನು ಮೂಲ ದ್ರಾವಿಡ ಅಥವಾ ಯಾವುದಾದರೂ ದ್ರಾವಿಡ ಭಾಷೆಯ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಸ್ಥಳನಾಮಗಳು ಸಾಮಾನ್ಯವಾಗಿ 'ಸ್ಥಿರಪಟ್ಟಿಕೆ' (fixed labels)ಗಳಾಗಿರುವುದರಿಂದ ಮೂಲ ಅರ್ಥ ಖಿಲವಾಗಿ ಅದು ಆ ಭಾಷೆಯ ಪದ ಹೌದೇ ಅಲ್ಲವೇ ಎಂಬ ಸಂಶಯವನ್ನು ಹುಟ್ಟಿಸಿಬಿಡುವಷ್ಟು ಅರ್ಥಹೀನ ಪದಗಳಿಂದ ಕೂಡಿರುವುದುಂಟು. ಅಂದರೆ ಅದು ಒಂದು ಕೇಂದ್ರ ವಸ್ತು (ಅಥವಾ ಘಟನೆಯನ್ನು)ವನ್ನು ಮುಖ್ಯವಾಗಿಟ್ಟುಕೊಂಡು ನಿರ್ದೇಶಿತವಾದರೂ ಕಾಲಾಂತರದಲ್ಲಿ ನಾಗರಿಕತೆಯ ವಿಕಾಸದೊಂದಿಗೆ ಜನವಸತಿಯ ಸಾಂದ್ರತೆಯ

25 ಡಾ॥ ಡಿ. ಎಲ್. ನರಸಿಂಹಾಚಾರ್ : ಕನ್ನಡ ಗ್ರಂಥ ಸಂಪಾದನೆ, ಡಾ॥ ಎಂ. ಎಂ. ಕಲಬುರ್ಗಿ : ಕನ್ನಡ ಗ್ರಂಥ ಸಂಪಾದನಾ ಶಾಸ್ತ್ರ ಮತ್ತು ಸೀತಾರಾಮ ಜಾಗೀರ್‌ದಾರ್ : ಗ್ರಂಥ ಸಂಪಾದನಾ ಶಾಸ್ತ್ರ ಪರಿಚಯ—ಈ ಕೃತಿಗಳಲ್ಲಿ ಚ/ಬ ಗಳಿಗೆ ಸಂಬಂಧಿಸಿದ ಪಾಠಾಂತರಗಳ ಬಗೆಗೆ ಅನೇಕ ಉದಾಹರಣೆಗಳನ್ನು ಕೊಟ್ಟಿರುತ್ತಾರೆ.

ಹೆಚ್ಚಳದಿಂದ ಆ ಸ್ಥಳನಾಮ ಸೂಚಿಸುವ ಕೇಂದ್ರವಸ್ತು ಜನರ ಸ್ಮೃತಿಪಟಲದಿಂದ ಅಳಿಸಿಹೋಗಬಹುದು.[26] ಇಂಥ ಸ್ಥಳನಾಮಗಳಲ್ಲಿ ಪ್ರಸ್ತುತ ಬೆಂಮತ್ತನೂರು/ಬೆಂಮತ್ತೂರು ಕೂಡ ಒಂದು—ಎಂದು ಹೇಳಬಹುದಾಗಿದೆ.

ಮೇಲ್ನೋಟಕ್ಕೆ ಬೆಂಮತ್ತು+(ನ)*+ಊರು ಎಂಬ ಅಂಶಗಳಿಂದ ಕೂಡಿದ ರೂಪವಿದೆಂದು ಅನಿಸುತ್ತದೆ. 'ಬೆಂಮತ್ತು' ಎಂಬ ಪೂರ್ವ ಪದದ ಅರ್ಥವೇನು? ಅದರ ಮೂಲಸ್ವರೂಪವೇನು? ಎಂಬುದನ್ನು ವಿಶ್ಲೇಷಿಸಿದರೆ ಅದು ಬೆಮ್+ಅತ್ತು ಎಂಬ ಎರಡು ಬೇರೆ ಬೇರೆ ಪದಗಳಿಂದಾದ ಒಂದು ಪದವೃಂದವಾಗಿರುವುದು ಕಂಡುಬರುತ್ತದೆ. ಬೆಮ್ ಎಂಬ ಪದಕ್ಕೆ ಬಿಸು, ಬೆಚ್ಚನೆ, ಬಿಸಿ, ಬೆಸೆ, ಎಂಬ ಅರ್ಥಗಳ ಜೊತೆಗೆ ಹಿಂಬದಿ the back ಎಂಬ ಅರ್ಥವಿದ್ದು, ಅದು ಇಲ್ಲಿ ಪ್ರಸ್ತುತವಾಗಿರುತ್ತದೆ. ಹಾಗೆಯೇ 'ಅತ್ತು' ಎಂಬ ಪದವು ಮೂಲದ್ರಾವಿಡದ್ದಾಗಿದ್ದು ಇಂದು ದ್ರಾವಿಡ ಭಾಷೆಗಳಲ್ಲಿ ಒಂದಾದ ಮಲೆಯಾಳಂನಲ್ಲಿ ಮಾತ್ರ "Mimosa" ಎಂಬ ಸಸ್ಯ ಕುಟುಂಬಕ್ಕೆ ಸೇರಿದ "inga" ಎಂಬ ಜಾತಿಯ ವನ್ಯ ಸಸ್ಯವನ್ನು ನಿರ್ದೇಶಿಸುವ ಪದವಾಗಿದೆ.[27] ಇದರ ಕಾಯಿಯನ್ನು ಸ್ನಾನಕ್ಕಾಗಿ ಬಳಸುತ್ತಾರೆ. ಈ ಮಿಮೋಸೇಸಿ ಕುಟುಂಬದ ಸಸ್ಯಗಳು ಉಷ್ಣವಲಯದಲ್ಲಿ ಬಹಳವಾಗಿ ಬೆಳೆಯುತ್ತವೆ. ಈ ಕುಟುಂಬಕ್ಕೆ ಸೇರಿದ ಅಕೇಸಿಯ ಜಾತಿಯಲ್ಲಿ ಕರಿಜಾಲಿ, ಕಗ್ಗಲಿ, ಸೀಗೆ, ಬನ್ನಿಮರ, ಆನೆಗೊಬ್ಬಿ, ಮುಳ್ಳು ಸೀಗೆ, ಮುಗಳಿ ಮುಂತಾದವು ಒಳಗೊಂಡಿರುತ್ತವೆ. ಇಂತಹ ಸಸ್ಯವರ್ಗವನ್ನು ಸ್ವಾಭಾವಿಕವಾಗಿಯೇ ಹೊಂದಿರುವ ಪ್ರದೇಶ ಇದೆಂಬುದನ್ನು ಚಿತ್ರದುರ್ಗ ಜಿಲ್ಲೆಯ ಗೆಝೆಟಿಯರಿನಲ್ಲಿ ಸ್ಪಷ್ಟಪಡಿಸಲಾಗಿದೆ.[28]

---

26 ಕೆಮ್ತೂರು ರಘುಪತಿಭಟ್ಟ : ತುಳುನಾಡಿನ ಸ್ಥಳನಾಮಗಳು (ಈ ವಾಕ್ಯ ಖಂಡದಲ್ಲಿನ ವಿವರಗಳನ್ನು ಸ್ಥಳನಾಮ ಸ್ವರೂಪ ಎಂಬ ಅಧ್ಯಾಯದಿಂದ ಸಂಗ್ರಹಿಸಲಾಗಿದೆ). ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨–೨೮)

* ಸ್ಥಳನಾಮಗಳಲ್ಲಿ ಮಧ್ಯಪ್ರತ್ಯಯಗಳು (infix) ಅಪರೂಪವಾಗಿಯಾದರೂ ನುಸುಳುವುದುಂಟು ಇಂಥ ಪ್ರತ್ಯಯಗಳು ಸಾಮಾನ್ಯವಾಗಿ ಸಂಬಂಧಕಾರಕ (ಷಷ್ಠೀ ವಿಭಕ್ತಿ ಪ್ರತ್ಯಯ)ವಾಗಿರುವುದು ಗಮನೀಯ ಅಂಶ.

27 T. Burrow & M.B. Emeneav : A Dravidian Etymological Dictionary, 1960

28 "Physicgraphically the district can be called a dry and thirsty land with broken hill ranges and huge undulating plains. The great plains are covered with stones and dwarf species of Mimosa locally called ಹೋತೆ ಜಾಲಿ and are dotted at vide intervals with villages scattered in the hollows, with some trees round them. These characteristics occupy one third of the entire district."

"In the vicinity of Chitradurga town, there are patches of acacias (ಕಗ್ಗಲಿ)"—Mysore State Gazetteer, Chitradurga District 1967, p. 18

ಈ ಹಿನ್ನೆಲೆಯಲ್ಲಿ ಈ ಸ್ಥಳವು ಬೆವ್+ಅತ್ತು+ಊರುಗಳಿಂದಾದ ಬೆಂಮತ್ತೂರು ಎಂಬ ಮೂಲರೂಪವೇ ಕಾಲಾಂತರದಲ್ಲಿ ಬೆಂಮತ್ತೂರು / ಬೆಂಮತ್ತನೂರು> ಬೆಂಮತ್ತೂರದುರ್ಗ>ಬೆಂಮತೂರ ಕಲ್ಲು / ಬೆಂಮತ್ತನ ಕಲ್ಲು>ಬೆಂಮತ್ತನಕಲ್ಲು ದುರ್ಗ ಎಂಬ ಹಂತಗಳಲ್ಲಿ ಬೆಳೆದು ವಿಜಯನಗರದ ಆಳಿಕೆಯ ಕಾಲದವರೆಗೂ ಪ್ರಚಲಿತವಿದ್ದಿತು—ಎಂಬುದು ಸ್ಪಷ್ಟವಾಗುತ್ತದೆ.[29] ಅಲ್ಲದೆ ಕ್ರಿ. ಶ. ೧೭-೧೮ನೆಯ ಶತಮಾನಗಳಲ್ಲಿ ಶಾಸನಸ್ಥವಾಗಿರುವ ಚಿನ್ಮನಗಿರಿದುರ್ಗ ಚಿತ್ರಕಲ್‌ದುರ್ಗ ಎಂಬ ಪ್ರಯೋಗಗಳಿಗೂ ಇದಕ್ಕೂ ನೇರವಾದ ಸಂಬಂಧವಿರುವುದಿಲ್ಲ ಎಂಬುದನ್ನು ಕೂಡ ಇದು ದೃಢಪಡಿಸುತ್ತದೆ.

ಇನ್ನು ಇಂದು ಅಧಿಕೃತವಾಗಿ ಬಳಕೆಯಲ್ಲಿರುವ 'ಚಿತ್ರದುರ್ಗ' ಎಂಬ ಹೆಸರು ಹೇಗೆ ಬಂದಿತು? ಡಾ|| ಎಂ. ಚಿದಾನಂದಮೂರ್ತಿಯವರು "ಚಿತ್ರದ ಮೂಲ ಸಿದ್ಧರು ಇರಬಹುದು. ಆಗ ಚಿತ್ರದುರ್ಗವು ಸಿದ್ಧರ+ಕಲ್ಲುಗಳ ದುರ್ಗ ಆಗುತ್ತದೆ" ಎಂದು ಹೇಳುತ್ತಾರೆ.[30] ಇದೇ ಅಭಿಪ್ರಾಯವನ್ನು ತಾವು ಸ್ವತಂತ್ರವಾಗಿಯೇ ಹೊಂದಿದ್ದರೆಂಬ ವಿಷಯವನ್ನು ಡಾ|| ಎಂ. ಎಂ. ಕಲಬುರ್ಗಿಯವರು ತಮ್ಮ ಲೇಖನವೊಂದರಲ್ಲಿ ಪ್ರಸ್ತಾಪಿಸಿರುತ್ತಾರೆ.[31]

ಪ್ರಚಲಿತ ಪ್ರಯೋಗಗಳ ಹಿನ್ನೆಲೆಯಲ್ಲಿ ಯೋಚಿಸಿದರೆ ಚಿತ್ರದ ಮೂಲ ಸಿದ್ಧರು ಆಗಿರುವ ಸಾಧ್ಯತೆ ತೀರ ಕಮ್ಮಿ, ಏಕೆಂದರೆ ಒಂದು ವೇಳೆ ಈ ಅಂಶ ನಿಜವಿದ್ದಿದ್ದರೆ ದೇಶಾದ್ಯಂತ ಅಲ್ಲಲ್ಲೆ ಕಂಡುಬರುವ ಸಿದ್ಧರ ಬೆಟ್ಟಗುಡ್ಡಗಳೆಲ್ಲವೂ, ಚಿತ್ರಬೆಟ್ಟಗುಡ್ಡಗಳಾಗಿ ಮಾರ್ಪಡಬೇಕಾಗಿದ್ದಿತು. ಹಾಗೆಯೇ ಸಿದ್ಧಪ್ಪ/ಸಿದ್ಧಮ್ಮ ಎಂಬ ವ್ಯಕ್ತಿನಾಮಗಳು ಕೂಡ ಚಿತ್ರಪ್ಪ/ಚಿತ್ರಮ್ಮಗಳಾಗಬೇಕಾಗುತ್ತಿತ್ತು. ಆದ್ದರಿಂದ ಇಂದಿನ ಚಿತ್ರದುರ್ಗದ ಮೂಲರೂಪ ಸಿದ್ಧರ ಸಾನಿಧ್ಯದಿಂದ ಸಾಧಿಸುವುದು ಸರಿಯಲ್ಲ, ಹಾಗೂ ಸಾಧ್ಯವಿಲ್ಲವೆಂದು ಹೇಳಬೇಕಾಗಿದೆ.

"ಚಿತ್ರ ಎಂಬುದು ಮೇಲ್ನೋಟಕ್ಕೆ ಸುಂದರ, ಆಕರ್ಷಕ, Picturesque ಎಂಬ ಅರ್ಥಗಳನ್ನು ಹೊಂದಿರುವ ಸಂಸ್ಕೃತ ಪದದಂತೆ ಕಂಡುಬರುತ್ತದೆ. ಆದರೆ

---

29 ಕರ್ನಾಟಕದ ಅನೇಕ ಊರುಗಳ ಹೆಸರಿನಲ್ಲಿ 'ಅತ್ತು' ಎಂಬುದು ವಿಶೇಷಾಂಶ (generic)ವಾಗಿರುವುದನ್ನು ಉದಾಹರಿಸಬಹುದು : (i) ಅತ್ತು + ಹಳ್ಳಿ = ಅತ್ತಳ್ಳಿ (ಟಿ. ನರಸೀಪುರ ತಾಲ್ಲೂಕು). (ii) ಅತ್ತು + ಊರು = ಅತ್ತೂರು (ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಬಸವಕಲ್ಯಾಣ ತಾಲ್ಲೂಕು). (iii) ಅತ್ತು + ನ + ಊರು = ಅತ್ತನೂರು (ಮಾನ್ವಿ ತಾಲ್ಲೂಕು). (iv) ಅತ್ತು + ಪುರ = ಅತ್ತಾವರ, ಇತ್ಯಾದಿ.

30 ಡಾ|| ಎಂ. ಚಿದಾನಂದಮೂರ್ತಿ : ವಾಗರ್ಥ (ಬೆಂಗಳೂರು ೧೯೮೧), ಪು. ೩೫-೬.

31 ಡಾ|| ಎಂ. ಎಂ. ಕಲಬುರ್ಗಿ : (i) ವಿಜಾಪುರದ ನಾಗಚಂದ್ರನ ಮಲ್ಲಿನಾಥ ಬಸದಿ ಹಾಗೂ ಚಿತ್ರದುರ್ಗದ ಪ್ರಾಚೀನ ಹೆಸರು : ಎರಡು ಟಿಪ್ಪಣಿಗಳು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೭೦-೧ (ಜೂನ್ ೧೯೮೫) ಪು. ೧೦೮-೯. (ii) ಮಾರ್ಗ, ಸಂಪುಟ ೨ (ಬೆಂಗಳೂರು ೧೯೮೮) ಪು. ೧೮೩-೭.

ಚಿತ್ರಕ್ಕೆ ಮೂಲ ಏನೋ ಬೇರೆ ಇರುವಂತಿದೆ, ಬಹುಶಃ ಚೆದರ್ (ಕೆದರ್= to scatter) ಇರಬಹುದು. ಎಂದರೆ 'ಕೆದರಿದ ಕಲ್ಲುಗಳ ದುರ್ಗ" ಎಂದೂ ಡಾ॥ ಎಂ. ಚಿದಾನಂದಮೂರ್ತಿಯವರು ಊಹಿಸಿರುತ್ತಾರೆ.[32]

ಚಿತ್ರದುರ್ಗದ ಬೆಟ್ಟದ ಮೇಲಿನ ಕಲ್ಲುಬಂಡೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಪ್ರಾಗೈತಿಹಾಸಿಕ ಕಾಲಕ್ಕೆ ಸೇರಿದ ಚಿತ್ರಗಳು ಇಂದಿಗೂ ಅಲ್ಲಲ್ಲಿ ಗೋಚರಿಸುತ್ತವೆ. ಪ್ರಾಯಶಃ ಇದನ್ನು ಗಮನಿಸಿದ್ದ ಜನಸಾಮಾನ್ಯರು ಮೊದಲಿನಿಂದಲೂ ಈ ಬೆಟ್ಟದ ಕಲ್ಲುಗಳನ್ನು 'ಚಿತ್ರಕಲ್' ಎಂದೇ ಸಂಬೋಧಿಸುತ್ತಿದ್ದು ಕಾಲಾಂತರದಲ್ಲಿ ದುರ್ಗರಚನೆಯೊಂದಿಗೆ 'ಚಿತ್ರಕಲ್ ದುರ್ಗ'ವೆಂದು ಕರೆಯಲ್ಪಟ್ಟಿರಬೇಕು. ಬಹುಶಃ ಇದೇ ಜನರ ಬಳಕೆಯಲ್ಲಿದ್ದ ಅಧಿಕೃತ ರೂಪ.

ವಿಜಯನಗರ ಅರಸರ ನಂತರ ಬೆಂಮತ್ತನೂರು / ಬೆಂಮತ್ತನಕಲ್ಲು ಎಂಬ ಶಾಸನಸ್ಥ ಸಮಕಾಲೀನ ಅಧಿಕೃತರೂಪ ಬಳಕೆ ತಪ್ಪಿ, ಪ್ರಾಯಶಃ ಜನಸಾಮಾನ್ಯರ ಬಳಕೆಯಲ್ಲಿದ್ದ 'ಚಿತ್ರಕಲ್‌ದುರ್ಗ' ಎಂಬ ರೂಪವೇ ಮಾನ್ಯತೆಗಳಿಸಿಕೊಂಡಿತೆಂದು ಹೇಳಬಹುದು. ಸ್ಥಳೀಯ ಪರಿಸರದ ಜನರ ಆಡುಮಾತಿನಲ್ಲಿ ಕೇವಲ 'ದುರ್ಗ' ಎಂದಷ್ಟೇ ಬಳಕೆಯಲ್ಲಿರುವುದು ಕಂಡುಬರುತ್ತದೆ. ಶ್ರೀ ಲಕ್ಷ್ಮಣ್ ತೆಲಗಾವಿಯವರು ತಮ್ಮ ಇತ್ತೀಚಿನ ಲೇಖನವೊಂದರಲ್ಲಿ ಸ್ಥಳೀಯ ತೆಲುಗು ಭಾಷಿಕರ ಆಡುಮಾತಿನಲ್ಲಿ 'ಚಿತ್ರಕಲ್ ದುರ್ಗ' ಎಂಬುದು ಇನ್ನೂ ಜೀವಂತವಾಗಿರುವುದನ್ನು ಗುರುತಿಸಿರುತ್ತಾರೆ.[33]

"ಚಿತ್ರಕಲ್‌ದುರ್ಗ ಇಂಗ್ಲೀಷರ ಉಚ್ಚಾರದಲ್ಲಿ ಚಿಟಲ್‌ಡ್ರುಗ್(Chitaldrug) ಆಯ್ತು. ಈ ಆಂಗ್ಲೀಕೃತ ರೂಪವನ್ನು ದೇಶಿಯಗೊಳಿಸುವಾಗ ದೇಶ್ಯಪದ 'ಕಲ್'ನ ಭಾಗ ಬಿಟ್ಟುಹೋಗಿ, ಅಚ್ಚ ಸಂಸ್ಕೃತದ ಚಿತ್ರದುರ್ಗ ಆಯ್ತು"[34] ಎಂಬ ಡಾ॥ ಎಂ. ಚಿದಾನಂದಮೂರ್ತಿಯವರ ಅಭಿಪ್ರಾಯ ಇಲ್ಲಿ ಪರಿಶೀಲನಾರ್ಹ. ಏಕೆಂದರೆ, ಚಿತ್ರದುರ್ಗಕ್ಕೆ ಸಂಬಂಧಿಸಿದ ನಿರೂಪ, ಚಾರಿತ್ರಿಕ ದಾಖಲೆ, ಇತ್ಯಾದಿಗಳಲ್ಲಿ 'ಚಿತ್ರದುರ್ಗ' ಎಂಬ ಪ್ರಯೋಗ ಕನಿಷ್ಟ ಕ್ರಿ. ಶ. ೧೭೨೪ರ ವೇಳೆಗಾಗಲೇ ಬಳಕೆಗೆ ಬಂದಿದ್ದ ಬಗ್ಗೆ ಆಧಾರಗಳಿವೆ.[35] ಅಲ್ಲದೆ ಈ ಪ್ರದೇಶದ ಮೇಲೆ ಆ ಕಾಲಕ್ಕಾಗಲೇ ಮರಾಠರೇ ಮುಂತಾದ ಆರ್ಯ ಭಾಷಿಕರ ಪ್ರಭಾವ ದಟ್ಟವಾಗಿದ್ದಿತ್ತೆಂಬುದು ಕೂಡ ಸ್ಪಷ್ಟ. ಆಂದಮೇಲೆ, 'ಚಿತ್ರಕಲ್ ದುರ್ಗ'ವೆಂಬುದು ಚಿತ್ರದುರ್ಗವಾಗಿ ಮಾರ್ಪಡುವಲ್ಲಿ ವಿದ್ವಾಂಸರು ಸೂಚಿಸಿರುವಂತೆ ಆಂಗ್ಲೀಕರಣಕ್ಕೊಳಗಾಗಿ ದೇಶ್ಯಪದ 'ಕಲ್'

---

32 ಡಾ॥ ಎಂ. ಚಿದಾನಂದಮೂರ್ತಿ: ವಾಗರ್ಥ, ಪು. ೩೫-೬

33 ಲಕ್ಷ್ಮಣ್ ತೆಲಗಾವಿ: ಕಾಮಗೇತಿ ಅರಸರು—ಕೆಲವು ವಿಚಾರಗಳು ಪ್ರತಿಕ್ರಿಯೆ, ಮಾನವಿಕ ಕರ್ನಾಟಕ ೧೩-೪, (ಅಕ್ಟೋಬರ್ ೮೭), ಪು. ೫೯

34 ಡಾ॥ ಎಂ. ಚಿದಾನಂದಮೂರ್ತಿ: ವಾಗರ್ಥ, ಪು. ೩೫

35 ಲಕ್ಷ್ಮಣ್ ತೆಲಗಾವಿ: ಪೂರ್ವೋಕ್ತ ಲೇಖನ, ಪು. ೬೦

ಲೋಪವಾಗಿರುವುದಕ್ಕಿಂತ ಆರ್ಯ ಭಾಷಿಕರ ಇಲ್ಲವೆ ಸ್ಥಳೀಯ ಶಿಷ್ಟ ಜನರ ಸೌಲಭ್ಯಾಕಾಂಕ್ಷೆಯ ಹಿನ್ನೆಲೆಯಲ್ಲಿಯೇ ದೇಶ್ಯಪದವಾದ 'ಕಲ್'ನ ಭಾಗ ಬಿಟ್ಟು ಹೋಗಿ ಸಂಸ್ಕೃತ ರೂಪವಾದ 'ಚಿತ್ರದುರ್ಗ' ಉಳಿದುಕೊಂಡಿರಬಹುದೆಂದು ಹೇಳ ಬಹುದಾಗಿದೆ. ಸದ್ಯಕ್ಕೆ ಶ್ರೀ ಲಕ್ಷ್ಮಣ್ ತೆಲಗಾವಿಯವರು ಅಭಿಪ್ರಾಯಪಟ್ಟಿರು ವಂತೆ "ಈ ಸ್ಥಳವು ೧೮ ನೆಯ ಶತಮಾನದ ಮೂರನೆಯ ದಶಕದ ವೇಳೆಗಾಗಲೇ 'ಚಿತ್ರಕಲ್ಲುದುರ್ಗ'ದೊಡನೆ 'ಚಿತ್ರದುರ್ಗ' ಎಂಬ ಅಧಿಕೃತ ನಾಮವನ್ನು ಹೊಂದಿತು ಎಂದಷ್ಟೇ ದೃಢವಾಗಿ ಹೇಳಬಹುದಾಗಿದೆ.[36]

ಪೂರ್ವದಲ್ಲಿ ಪ್ರಚಲಿತವಿದ್ದ ಈ ನಾಡಿನ ಮುಖ್ಯ ಸ್ಥಳವು ಮಾತ್ರ ಈ ಮೇಲೆಯೇ ಹೇಳಿರುವಂತೆ ವನ್ಯಸಸ್ಯಗಳ ಮೂಲದಿಂದ ರೂಪ ಪಡೆದು ನಂತರದಲ್ಲಿ ಕಲ್ಲು, ದುರ್ಗ ಎಂಬ ಸಮೀಪದ ಬೆಟ್ಟ ಮತ್ತು ಕೋಟೆಯ ಸಹಚರ್ಯವನ್ನು ತನ್ನಲ್ಲಿ ಅಳವಡಿಸಿಕೊಂಡಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ.

ಇನ್ನು ಈ ಬೆಂಮತ್ತನೂರು ನಾಡಿನಲ್ಲಿ ಅಂತರಗತವಾಗಿದ್ದ ಊರುಗಳು ಹಾಗೂ ಪ್ರದೇಶಗಳನ್ನು ಅವಲೋಕಿಸಿದರೆ ಅವುಗಳೆಲ್ಲವೂ ಇಂದಿನ ಚಿತ್ರದುರ್ಗದ ತಾಲೂಕಿನ ಕಸಬ ಹೋಬಳಿ, ಬರಮಸಾಗರ ಮತ್ತು ಹಿರೇಗುಂಟೂರು ಹೋಬಳಿ ಗಳಿಗೆ ಸೇರಿದ ಪ್ರದೇಶಗಳನ್ನು ಒಳಗೊಂಡಿದ್ದುದು ಸ್ಪಷ್ಟವಾಗುತ್ತದೆ. ವಿಜಯನಗರ ನಂತರ ಕಾಲದ ಉಲ್ಲೇಖಗಳನ್ನು ಸೇರಿಸಿಕೊಂಡರೆ ಈ ನಾಡಿನ ಮೂವತ್ತಕ್ಕೂ ಹೆಚ್ಚು ಗ್ರಾಮಗಳು ಶಾಸನೋಕ್ತವಾಗಿವೆ. ಅವುಗಳಲ್ಲಿ ಕ್ರಿ. ಶ. ೧೪ನೇ ಶತಮಾನ ದಿಂದೀಚಿನ ಶಾಸನಗಳಲ್ಲಿ ಪ್ರಯುಕ್ತವಾಗಿರುವ ಬಹಳಷ್ಟು ಗ್ರಾಮಗಳನ್ನು ಗುರುತಿಸ ಬಹುದಾಗಿದೆ. ಉದಾಹರಣೆಗೆ: ಕುಂನೂರು>ಕೊನನೂರು (ಬರಮಸಾಗರ ಹೋಬಳಿ),[37] ಸಿದ್ಧಪುರ>ಸಿದ್ಧಾಪುರ (ಬರಮಸಾಗರ ಹೋಬಳಿ),[38] ಹುಲ್ಲೂರ> ಹುಲ್ಲೂರು (ಹಿರೇಗುಂಟೂರು ಹೋಬಳಿ),[39] ಚಿಕ್ಕಪುರ>ಚಿಕ್ಕಾಪುರ[40] (ಹಿರೇ ಗುಂಟೂರು ಹೋಬಳಿ) ಕುಂಚಿಗನಹಳ್ಳಿ>ಮಲ್ಲಪುರ[41] (ಕಸಬ ಹೋಬಳಿ), ಮಲ್ಲ ಪುರ>ಬೆನಕಾಪುರ[42] (ಹಿರೇಗುಂಟೂರು ಹೋಬಳಿ), ಬರಮಸಾಗರ>ಭರಮ ಸಾಗರ[43] ಯೆಂಮೆಹಟ್ಟಿ>ಹೆಮ್ಮನಗಟ್ಟ[44] (ಬರಮಸಾಗರ ಹೋಬಳಿ) ಗುಂಟ

---

36 ಲಕ್ಷ್ಮಣ್ ತೆಲಗಾವಿ – ಪೂರ್ವೋಕ್ತ ಲೇಖನ, ಪು. ೬೧

37 ಎಪಿಗ್ರಾಫಿಯಾ ಕರ್ನಾಟಿಕ, ಸಂ. ೧೧, ಚಿತ್ರದುರ್ಗ ೬ (೧೨೩೮)

38 ಅದೇ.

39 ಅದೇ.

40 ಅದೇ, ೫೫ (೧೩೫೫)

41 ಅದೇ, ೧೪ (೧೪೧೧)

42 ಅದೇ, ೪೫ (೧೫೩೮)

43 ಅದೇ, ದಾವಣಗೆರೆ ೧೬೪ (೧೬೯೮)

44 ಅದೇ.

ನೂರು>ಗುಂಟನೂರು (ಹಿರೇಗುಂಟೂರು ಹೋಬಳಿ)[45] ಚಿತ್ರಹಳ್ಳಿ>ಚಿತ್ರಹಳ್ಳಿ[46] (ಬರಮಸಾಗರ ಹೋಬಳಿ) ಮಳಲಿಗ>ಮಳಲಿ[47] (ಹಿರೇಗುಂಟೂರು ಹೋಬಳಿ), ಹಳುವಥಾರ>ಹಳುವದಾರ[48] (ಹಿರೇಗುಂಟೂರು ಹೋಬಳಿ) ಪಿಳೇಕೆರೇನಹಳ್ಳಿ> ಪಿಳ್ಳೇಕೆರೆ (ಕಸಬ ಹೋಬಳಿ).[49]

ಹದಿನಾಲ್ಕನೆಯ ಶತಮಾನಕ್ಕಿಂತ ಹಿಂದಕ್ಕೆ ಸೇರಿದ ಊರುಗಳಲ್ಲಿ ಬೆಂಣೆದೋಣೆ ಎಂಬುದು ಈಗಿನ ಕಸಬ ಹೋಬಳಿಗೆ ಸೇರಿದ ಮೆದಕೆರೆಪುರ ಗ್ರಾಮದ ಪಶ್ಚಿಮಕ್ಕಿದ್ದಿತೆಂದು ತಿಳಿದುಬರುತ್ತದೆ.[50] ನಗರೇಶಿ>ಗೋಪಾಳಪುರವೆಂಬ[51] ಪ್ರತಿನಾಮವನ್ನು ಹೊಂದಿದ್ದಿತು. ವೊಳಗೆರೆ,[52] ಪೆರುಮಾಳಿಪುರ,[53] ಬೆಳದಹಳ್ಳಿ,[54] ಬನ್ನಿಯ ಬೆನಕ[55] ಮೊದಲಾದವು ಪ್ರಾಯಶಃ ಈಗಿನ ಚಿತ್ರದುರ್ಗ ಪಟ್ಟಣದಲ್ಲಿಯೇ ಲೀನವಾಗಿ ಹೋಗಿರಬೇಕೆಂದು ತೋರುತ್ತದೆ. ಇನ್ನುಳಿದ ಹೊಂನ್ನುಣಿಸೆ, ಅಂಬಲೆಯ ಹರಿಯ, ಎಸಗೂರು, ಚಿಂನಗಣಿಕ, ಮುಸುವಡಿಯಪುರ, ಕಲ್ಲುಗೊಂಡವನಹಳ್ಳಿ ಮುಂತಾದವುಗಳನ್ನು ಗುರುತಿಸಬೇಕಾಗಿದೆ.

ಯಾವುದೇ ಒಂದು ನಾಡು ಕೇವಲ ಭೌಗೋಳಿಕ ವ್ಯಾಪ್ತಿಯನ್ನಷ್ಟೇ ಪಡೆದಿರುವುದಿಲ್ಲ. ಅದಕ್ಕೆ ತನ್ನದೇ ಆದ ರಾಜಕೀಯ, ಸಾಂಸ್ಕೃತಿಕ ಪರಿಸರವೂ ಇರುತ್ತದೆ. ಪ್ರಸ್ತುತ ಈ ಬೆಂಮತ್ತೂರು ನಾಡಿನ ಕೆಲವು ಶಾಸನಗಳಲ್ಲಿ ವ್ಯಕ್ತವಾಗಿರುವ ರಾಜಕೀಯ, ಸಾಂಸ್ಕೃತಿಕ ಇತ್ಯಾದಿ ವಿಷಯಗಳ ಒಂದು ಪಕ್ಷಿನೋಟವನ್ನಷ್ಟೇ ಇಲ್ಲಿ ನೀಡಲಾಗಿದೆ:

ಬೆಂಮತ್ತೂರು ನಾಡಿನ ರಾಜಕೀಯ ಇತಿಹಾಸ ಕಲ್ಯಾಣದ ಚಾಳುಕ್ಯರಿಂದ ಆರಂಭವಾಗುತ್ತದೆ. ಕ್ರಿ. ಶ. ೧೧೮೭–೧೧೯೯ರ ಅವಧಿಯಲ್ಲಿ ಈ ಪ್ರದೇಶವನ್ನು ಕಲ್ಯಾಣದ ಚಾಳುಕ್ಯರ ತ್ರಿಭುವನ ಮಲ್ಲದೇವನು ಆಳಿದ್ದಾನೆ.[56] ಕ್ರಿ.ಶ. ೧೨೧೮ರ

---

45 ಎ. ಕ. ಚಿತ್ರದುರ್ಗ ೪೫ (೧೫೩೮)
46 ಅದೇ, ೩೭ (೧೭೦೦ ?)
47 ಅದೇ.
48 ಅದೇ, ೫೬ (೧೭೧೮)
49 ಅದೇ, ೩೧ (೧೭೧೪)
50 ಅದೇ, ೩೬ (೧೧೯೯)
51 ಅದೇ, ೬ (೧೩೩೮)
52 ಅದೇ, ೩೨ (೧೨೮೬)
53 ಅದೇ, ೧೨ (೧೨೮೬)
54 ಅದೇ.
55 ಅದೇ.
56 ಅದೇ, ೩೩ (೧೧೮೭) ಮತ್ತು ೩೬ (೧೧೯೯)

ಶಾಸನವೊಂದು ಹೊಯ್ಸಳ ವೀರಬಲ್ಲಾಳನ ಆಳಿಕೆಯ ಕುರುಹನ್ನು ನೀಡುತ್ತದೆ.[57] ನಂತರದಲ್ಲಿ ವೀರ ಸೋಮೇಶ್ವರ (೧೨೩೫)[58] ನಾರಸಿಂಹದೇವ (೧೨೮೫)[59] ಮತ್ತು ಮೂರನೇ ವೀರಬಲ್ಲಾಳ (೧೩೨೮)[60] ಅವರುಗಳು ಈ ಪ್ರದೇಶದ ಅಧಿಪತಿಗಳಾಗಿದ್ದರು. ಸುಮಾರು ಕ್ರಿ.ಶ. ೧೩೪೫ ಕ್ಕಿಂತಲೂ ಹಿಂದೆಯೇ ವಿಜಯನಗರದ ಅರಸರ ಆಳಿಕೆ ಈ ಪ್ರದೇಶದಲ್ಲಿ ಪ್ರಾರಂಭವಾಗಿರಬೇಕು. ಬುಕ್ಕರಾಯ (೧೩೫೫-೧೩೫೬)[61] ಪ್ರತಾಪದೇವರಾಯ (೧೪೧೧),[62] ಅಚ್ಯುತರಾಯ (೧೫೩೮)[63] ಮುಂತಾದವರು ಈ ನಾಡನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಆನಂತರದಲ್ಲಿ ಈ ಪ್ರದೇಶ ಪಾಳೆಯಗಾರರಾದ ಕಾಮಗೇತಿ ಅರಸರ ಆಳಿಕೆಗೆ ಒಳಪಟ್ಟದ್ದ ಅಂಶ ಬರಮಣ್ಣನಾಯಕ[64] (೧೬೯೮-೧೭೦೮), ಹನುಮನಾಯಕ[65] (೧೭೩೦) ಆವರುಗಳ ಶಾಸನಗಳಿಂದ ತಿಳಿದುಬರುತ್ತದೆ.

ಪ್ರಾರಂಭದಿಂದಲೂ ಇದು ಒಂದು ನೆಲೆವೀಡಾಗಿದ್ದುದರಿಂದ ಅನೇಕ ಮಹಾಮಂಡಲೇಶ್ವರರು ಮತ್ತು ಅವರ ದಂಡ ನಾಯಕರುಗಳ ವಾಸಸ್ಥಾನವಾಗಿತ್ತು. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಾ ಸಾಮಂತ ಕಾಮಯ್ಯ ನಾಯಕ ಈ ಬೆಂಮತ್ತನೂರಿನ (ಬೆಂಮಚ್ಚನೂರಿನ) ನೆಲೆವೀಡಿನಿಂದ[66] ರಾಜ್ಯಭಾರ ಮಾಡಿದ ವಿವರ ಶಾಸನಗಳಲ್ಲಿ ಬಂದಿದೆ. ಹೊಯ್ಸಳರ ಕಾಲದಲ್ಲಿ ಸೋಮೆಯ ದಂಡನಾಯಕ ಹಿರಿಯ ಬಲ್ಲಾಳ ದಂಡನಾಯಕರುಗಳು ಈ ನೆಲೆವೀಡಿನಿಂದ ಆಳಿರುತ್ತಾರೆ.[67]

ಮಹಾಪ್ರಧಾನ ಮೆದಗಿದೇವ ದಂಡನಾಯಕ, ಆಳಿಯ ಮಾಚಯ ದಂಡನಾಯಕ, ಅಳಿಯ ಸಿಂಗೆಯ ದಂಡನಾಯಕ,[68] ಬಲ್ಲಪ್ಪ ದಂಡನಾಯಕರ[69] ಹೆಸರುಗಳು ಶಾಸನೋಕ್ತವಾಗಿವೆ.

---

57 ಎ. ಕ. ಹೊಳಲಕೆರೆ ೨
58 ಅದೇ, ಜಗಳೂರು ೩೩
59 ಅದೇ, ಚಿತ್ರದುರ್ಗ ೧೨, ೩೨
60 ಅದೇ, ೪, ೬
61 ಅದೇ, ೨, ೩
62 ಅದೇ, ೧೪
63 ಅದೇ, ೪೫
64 ಅದೇ, ದಾವಣಗೆರೆ ೧೬೪, ಚಿತ್ರದುರ್ಗ ೩೭, ೩೧, ೫೬
65 ಅದೇ, ಚಿತ್ರದುರ್ಗ ೫೪
66 ಅದೇ, ೩೩, ೩೬
67 ಅದೇ, ಹೊಳಲಕೆರೆ ೨
68 ಅದೇ, ಚಿತ್ರದುರ್ಗ ೧
69 ಅದೇ, ೪

ವಿಜಯನಗರ ಅರಸರ ಕಾಲದಲ್ಲಿ ಮಲ್ಲಿನಾಥ ಒಡೆಯನೆಂಬುವನ ಪ್ರಸ್ತಾಪ ಶಾಸನಗಳಲ್ಲಿ ವಿಶೇಷವಾಗಿ ಬಂದಿದೆ.[70] ಜೊತೆಗೆ ಹಡಪದ ಪೊತ್ತಿನಾಯಕ ಅವರ ಮಕ್ಕಳು ವಿಠಲಪ್ಪ ನಾಯಕರುಗಳ ಉಲ್ಲೇಖಗಳನ್ನೂ ಕಾಣಬಹುದು.[71]

ಸ್ಥಳೀಯ ಆಡಳಿತಕ್ಕೆ ಸಂಬಂಧಿಸಿದಂತೆ ಮಹಾಪ್ರಭು ಹರಿಯಮ ಗವುಂಡನ ಹೆಸರು ಶಾಸನವೊಂದರಲ್ಲಿ ಬಂದಿದೆ.[72] ನಗರೇಖ ಸ್ಥಳದ ಕಾಮಗಉಡನ ಮಗ ಬೆನಕಗವುಡ,[73] ಬೆಂಣ್ಣೆದೊಣೆಯ ಕಾಮಗಉಡನ ಮಗ ಬಲ್ಲಗಉಡ,[74] ಹಾಗೆಯೇ ಹಾಲನಾಗಗವುಡ,[75] ವಿಠಲಗವುಡ, ಕೇತಗವುಡ[76] ಮುಂತಾದ ಊರುಗೌಡರ ಉಲ್ಲೇಖಗಳು ಗಮನ ಸೆಳೆಯುತ್ತವೆ. ಸೋಯಿಸೆಟ್ಟಿ ಎಂಬ ಪಟ್ಟಣಸೆಟ್ಟಿಯ ಪ್ರಸ್ತಾಪ ಶಾಸನವೊಂದರಲ್ಲಿ ಬಂದಿದೆ. ಚವುಡಿಸೆಟ್ಟಿ ಮೊದಲಾದ ವರ್ತಕರ ಉಲ್ಲೇಖಗಳೂ ಇವೆ.[77] ಜೊತೆಗೆ ವೀರಪ್ಪನೆಂಬುವನು ಪಟ್ಟಣದ ಸೇನಬೋವ ನಾಗಿದ್ದ ಅಂಶ ಶಾಸನವೊಂದರಿಂದ ತಿಳಿದು ಬರುತ್ತದೆ.[78]

ಈ ನಾಡಿನ ಶಾಸನಗಳಲ್ಲಿ ಉಕ್ತವಾಗಿರುವ ಸಾಂಸ್ಕೃತಿಕ ಅಂಶಗಳು ಗಮನಾರ್ಹವಾಗಿವೆ. ಅವುಗಳಲ್ಲಿ ಮುಖ್ಯವಾಗಿ ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ, ಲಿಂಗ ಪ್ರತಿಷ್ಠಾಪನೆ, ದೇವತಾ ಮೂರ್ತಿಗಳ ಪ್ರತಿಷ್ಠಾಪನೆ, ದೇವಾಲಯಗಳಲ್ಲಿ ದಿನನಿತ್ಯ ನಡೆಯಬೇಕಾದ ಪೂಜೆ ಪುನಸ್ಕಾರಗಳ ವಿವರಗಳೊಂದಿಗೆ ಕೆಲವು ವಿಶಿಷ್ಟ ಪೂಜಾ ಕೈಂಕರ್ಯಗಳ ವಿವರಗಳು; ಈ ಕಾರ್ಯಗಳು ಸಾಂಗವಾಗಿ ಸಾಗಲು ಪುರಗಳ ನಿರ್ಮಾಣ ಮತ್ತು ದಾನ, ಜೀರ್ಣೋದ್ಧಾರ ಹಾಗೂ ಅಗ್ರಹಾರ, ಬ್ರಹ್ಮಪುರಿಗಳ ಸ್ಥಾಪನೆ ಮುಂತಾದ ವಿವರಗಳನ್ನಲ್ಲದೆ, ದೇವಾಲಯದ ಸ್ಥಾನಿಕರು, ಕೆರೆಕಟ್ಟೆ ನಿರ್ಮಾಣ-ಜೀರ್ಣೋದ್ಧಾರ, ಸಂತೆ, ಭೂಸ್ಥಿತಿ, ಸ್ಮಾರಕ ಶಿಲೆ, ಇತ್ಯಾದಿ ಅನೇಕ ವಿಷಯಗಳು ಸಮಾವೇಶಗೊಂಡು ಗಮನಾರ್ಹವಾಗಿವೆ.

ಹೀಗೆ, ಬೆಂಮತ್ತನೂರ ನಾಡು ಕ್ರಿ. ಶ. ೧೨ನೇ ಶತಮಾನದಿಂದ ೧೬ನೇ ಶತಮಾನದವರೆಗೂ ಪ್ರಖ್ಯಾತವಾಗಿ ಕರ್ನಾಟಕದ ಇತಿಹಾಸದಲ್ಲಿ ತನ್ನದೇ ಆದ ಪಾತ್ರವನ್ನು ವಹಿಸಿತು. ಕಲ್ಯಾಣದ ಚಾಳುಕ್ಯರ, ಹೊಯ್ಸಳರ, ವಿಜಯನಗರದ

---

70 ಎ.ಕ. ೬೭, ೩, ೨, ೫೫

71 ಅದೇ, ೮೫

72 ಅದೇ, ೩೬

73 ಅದೇ, ೧೨

74 ಅದೇ, ೩೨

75 ಅದೇ, ೬

76 ಅದೇ.

77 ಅದೇ.

78 ಅದೇ.

ಅರಸರ ಅಧಿಕಾರಿವರ್ಗದವರಿಗೆ ನೆಲೆವೀಡಾಗಿ ಆಶ್ರಯ ಸ್ಥಾನದಲ್ಲಿದ್ದು, ಉತ್ತರ ದಕ್ಷಿಣ ಕರ್ನಾಟಕಗಳ ಸಂಸ್ಕೃತಿಯ ಸಂಗಮ ಸ್ಥಳವಾಗಿ ವಿಜಯನಗರದ ನಂತರ ಬಂದ ಚಿತ್ರದುರ್ಗದ ಕಾಮಗೇತಿ ಅರಸರ ಭವ್ಯ ಇತಿಹಾಸಕ್ಕೆ ಭದ್ರ ಬುನಾದಿಯನ್ನು ಹಾಕಿ ಕೊಟ್ಟಿದ್ದಿತು, ಅಲ್ಲದೆ ರಾಜಕೀಯ ಧಾರ್ಮಿಕ ಸಾಂಸ್ಕೃತಿಕ ಮುಂತಾದ ಕ್ಷೇತ್ರಗಳಲ್ಲಿ ಮಹತ್ವದ ಪಾತ್ರವನ್ನು ವಹಿಸಿತ್ತೆಂದು ಹೇಳಬಹುದು. ಒಟ್ಟಾರೆ ಇದು, ಈ ನಾಡಿನ ಒಂದು ಸ್ಥೂಲ ಅವಲೋಕನವಷ್ಟೇ ಆಗಿದ್ದು, ಈ ದಿಸೆಯಲ್ಲಿ ಇನ್ನೂ ವಿಸ್ತೃತವಾದ ಅಧ್ಯಯನಗಳು ನಡೆಯಬೇಕಾಗಿದೆ.*

* ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಹಾಗೂ ಪ್ರಾಚೀನ ಇತಿಹಾಸ ವಿಭಾಗಗಳ ಆಶ್ರಯದಲ್ಲಿ ೧೯೮೯ರ ಮಾರ್ಚಿ ೨೪ ರಿಂದ ೨೬ರವರೆಗೆ ನಡೆದ 'ಸೊಸೈಟಿ ಆಫ್ ಸೌತ್ ಇಂಡಿಯನ್ ಹಿಸ್ಟರಿ'ಯ ಎಂಟನೆಯ ಅಧಿವೇಶನದಲ್ಲಿ ಮಂಡಿಸಿದ ಸಂಪ್ರಬಂಧದ ವಿಸ್ತೃತ ರೂಪ. ಈ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನೆರವಾದ ಶ್ರೀ ದೇವರ ಕೊಂಡಾರೆಡ್ಡಿ ಮತ್ತು ಡಾ॥ ಎಂ. ವಿ. ಶ್ರೀನಿವಾಸ್ ಅವರುಗಳಿಗೆ ಲೇಖಕ ಋಣಿ.

# ಇಮ್ಮಡಿ ಗುರುಸಿದ್ಧಸ್ವಾಮಿಗಳ 'ಶಿವರಹಸ್ಯ ಪುರಾಣ'

ಎಸ್. ಶಿವಣ್ಣ

ಬಸವಪಥ ೪-೨, ಮೇ ೧೯೮೨ರಲ್ಲಿ ಇಮ್ಮಡಿ ಗುರುಸಿದ್ಧ ಸ್ವಾಮಿಗಳ 'ಶಿವರಹಸ್ಯ'ದ ಬಗೆಗೆ ಪರಿಚಯಾತ್ಮಕ ಲೇಖನವೊಂದನ್ನು ಪ್ರಕಟಿಸಲಾಗಿತ್ತು. ಆಗ 'ಶಿವರಹಸ್ಯ ಪುರಾಣ'ದ ಮೊದಲ ನಾಲ್ಕು ಕಾಂಡಗಳವರೆಗಿನ ಅಪೂರ್ಣ ಪ್ರತಿ ಲಬ್ಧವಾಗಿತ್ತು.

ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ಅಧ್ಯಯನ ಸಂಸ್ಥೆ'ಯ ಹಸ್ತಪ್ರತಿ ಸಂಗ್ರಹಕ್ಕೆ ಇಮ್ಮಡಿ ಗುರುಸಿದ್ಧಸ್ವಾಮಿಗಳ 'ಶಿವರಹಸ್ಯ ಪುರಾಣ'ದ ಕ್ರಮಾಂಕ ೧೯೫೦ರ ಅಪೂರ್ಣ ಓಲೆ ಕೃತಿಯೊಂದು ಸೇರ್ಪಡೆಯಾಗಿದೆ. ಇದರಲ್ಲಿ ಕಾಂಡ ೬ರ ಉತ್ತರ ಭಾಗ (ಅಧ್ಯಾಯ ೨೭-೪೦) ಮತ್ತು ಕಾಂಡ ೭ರ ಪೂರ್ವ ಭಾಗ (ಅಧ್ಯಾಯ—೧-೮) ಗಳು ಅಪೂರ್ಣವಾಗಿ ಲಭಿಸಿವೆ. ಈ ಉಪಲಬ್ಧ ಭಾಗಗಳಲ್ಲಿನ ಅಧ್ಯಾಯಗಳ ಪಲ್ಲವಿಗಳನ್ನು ಹಾಗೂ ಆ-ಆ ಅಧ್ಯಾಯಗಳಲ್ಲಿನ ಒಟ್ಟು ಪದ್ಯ ಸಂಖ್ಯೆ ಮತ್ತು ಅಧ್ಯಾಯಗಳ ಕ್ರಮಸಂಖ್ಯೆಯನ್ನು ಈ ಮುಂದೆ ಕೊಡಲಾಗಿದೆ.

ಪ್ರಸ್ತುತ ಪ್ರತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ಸಂಬಂಧಿಸಿದ ಅಧಿಕಾರಿಗಳಿಗೆ ವಂದನೆಗಳು.

### ದಕ್ಷಕಾಂಡ (ಕಾಂಡ-೬)

೨೦ —* ||೨೭||

೩೮ ಗಜಮುಖಾಸುರನನು ಹತಿಸಿ ಹರಿ
ಯಜಗರದ ರೂಪಳಿದುದನು ನೀ
ರುಜ ದಧೀಚಿ ಯಮಂಗೆ ಪೇಳ್ದುದನುಸಿರ್ದನಾ ಸೂತಂ ||೨೮||

* ಈ ಅಧ್ಯಾಯದ ಪಲ್ಲವಿ ಹಾಗೂ ಆದಿಯ ಷಟ್ಪದಿಗಳಿಲ್ಲ.

೧೯ ದುರುಳ ದಕ್ಷಂಗಿತ್ತು ಶಾಪವ–
ನಿರದವನ: ಯಾಗಾಗತರನಾ
ವರ ದಧೀಚಿ ಸಮಂತು ಶಪಿಸಿದನೆಂದನಾ ಸೂತಂ || ೨೯ ||

೪೩ ಮುನಿವರನು:ಗಮಿಸಲು ಪತಿಯ ಪದ
ವನಜಕೆಱಗುತೆ ದೇವಿ ತತ್ಕ್ರತು
ಹನನ ವಿಜ್ಞಾಪನವನೆಸಗಿದಳೆಂದನಾ ಸೂತಂ || ೩೦ ||

೨೬ ವರ ಸತಿಯ ನುಡಿಗೇಳ್ದು ಶಂಕರ–
ನಿರದೆ ನೆನೆಯಲು ಬೀರನಾಗಳ್
ಬರದಿನುದಿಸುತೆ ಯಾಗಕೆಯ್ದಿದನೆಂದನಾ ಸೂತಂ || ೩೧ ||

೨೧ ವೀರಭದ್ರನ ಸೇನೆ ಸುರರನು
ಗೋರಿಸುತ್ತಿರಲಮರರೆಲ್ಲರು
ಚಾರಿಯಿಲ್ಲದ ಮಾತನಾಡಿದರೆಂದನಾ ಸೂತಂ || ೩೨ ||

೩೪ ವೀರನಮರರನಪ್ಪಳಿಸಿ ಮರ–
ಲ್ದಾ ರಮಾಪತಿಯೊಡನೆ ಕೂಡಿದ
ನೈ ರಚಿತವಿಧಿ ಮುನಿಗಳಾಲಿಪುದೆಂದನಾ ಸೂತಂ || ೩೩ ||

೪೪ ಹರಿಯೊಡನೆ ನೆಱೆಕಾದಿ ಸೋಲಿಸಿ
ಸರಸಿಜೋದ್ಭವನಂದು ಯಾಚಿಸಿ
ಬರದಿ ಸಾರಥಿಯಾಗೆ ಸಲಹಿದನೆಂದನಾ ಸೂತಂ || ೩೪ ||

೪೪ ಬೇಗ ನಿಜವಲ್ಲಭನ ದಯದಿಂ–
ದಾಗ ದಾಕ್ಷಾಯಣಿಯು ಪಡೆದಳು
ಯಾಗದೊಳು ಮಡಿದಮರರಸುಗಳನೆಂದನಾ ಸೂತಂ || ೩೫ ||

೪೬ ದಕ್ಷ ಕೇಳಿದೊಡುಸುರಿದನು ಕಮ–
ಲಾಕ್ಷನಿಗೆ ತನಗಾದ ಕದನದ
ಲಕ್ಷಣವನಾ ಬೊಮ್ಮನೆಂದನು ಸೂತ ಮುನಿಗಳಿಗೆ || ೩೬ ||

೩೭ ಅಜನಣುಗನಂ ಶಿಳುಪುತಭ[ವ]ನ
ಭಜನೆಯಿಂದೊಲಿಸುತ್ತೆ ತನ್ನಯ
ನಿಜಪದವ ಪಡೆದಿರ್ದನೆಂದನು ಮುನಿಗಳಿಗೆ ಸೂತಂ || ೩೭ ||

೩೫ ಕೇಳಲೊಡನುಸುರಿದನು ಮುನಿಗಳ
ಮೇಳದೊಡನೆ ಮಹಾನುಭಾವ ದ-
ಯಾಳು ಸೂತನಜಾಂಡದುದಯಕ್ರಮವನೆಲ್ಲವನು || ೩೮ ||

೬೭ ವಿಸ್ತರಿಸಿ ಹೇಳಿದನು ಸೂತ ಸ-
ಮಸ್ತ ನಗ ಸಾಗರ ಸುಮೇರುಗ-
ಳಸ್ಥಿತಿಯನಮರರಿಗೆ ಜಂಬೂದೀಪದಕ್ರಮಮಂ || ೩೯ ||

೭೨ ಏಳುಕಡಲುಗಳೇಳುಶೈಲಗ-
ಳೇಳುತತ್ತ್ವ ದ್ವೀಪಗಳನೊಲಿ-
ದಾಳದವರಸ್ಥಿತಿಯನುಸಿರ್ದನು ಮುನಿಗಳಿಗೆ ಸೂತಂ || ೪೦ ||

## ಉಪದೇಶ ಕಾಂಡ (ಕಾಂಡ-೭)

೪೧ ತಾಪಸರು ವಿಜ್ಞಾಪಿಸಲ್ಕತಿ
ಗೋಪ್ಯತರವಹ ಕಥೆಯನುಸುರಿದ-
ನಾ ಪರಮಮುನಿಯಾ ಮಹಾಕೈಲಾಸದಸ್ಥಿತಿಯಾ || ೧ ||

೨೫ ವಿನಯದಿಂ ಬೆಸಗೊಂಡ ಮುನಿಗಳಿ-
ಗನುನಯದೊಳಾ ಸೂತನುಸುರಿದ-
ನನಘ ಕೈಲಾಸದ ಸಮೂಲಾಂತವನು ಉತ್ತರಿಸಿ || ೨ ||

೩೧ ಶೂರಪದ್ಮಾದಿಗಳುದಯವನು-
ದಾರ ಮುನಿವರನುಸುರಿದನು ಸುವಿ-
ಚಾರದಿಂ ಬೆಸಗೊಂಡ ಋಷಿಗಳವಾರದೊಡನೊಲಿದು || ೩ ||

೩೦ ಅನುಜೆಯಜಮುಖಿಯುಸಮ ಶೂರನ
ಜನನಿ ಮಾಯೆಯರೆಲ್ಲಿಗೈದಿದ-
ರೆನಲು ಮುನಿವರರವರ ವೃತ್ತಾಂತವನು ತಿಳುಹಿದನು || ೪ ||

೩೧ ಮಕ್ಕಳಾದಿಯನುಸುರಿದಳು ಮಗು-
ಳಕ್ಕಱಿಂ ಬೆಸಗೊಳಲು ಮಾಯೆಯು
ಚಕ್ಕನಾಲಿಪುದೆಲೆ ತಪೋಧನರೆಂದನಾ ಮುನಿಪಂ || ೫ ||

೩೦ ಮುನ್ನ ತಾನಾರೆಂಬುದನು ಮಗ-
ಳನ್ನು ಬೆಸಗೊಳಲುಸುರಿದಳು ಸಲೆ
ಚೆನ್ನೆ ಮಾಯೆಯು ಲಾಲಿಸೆಂದನು ಮುನಿಗಳಿಗೆ ಸೂತಂ ‖ ೬ ‖

೩೩ ಮಾಯೆ ಮಗಳಾದ್ಯಂತವನು ಸದು-
ಪಾಯದಿಂದುಸುರಿದಳೆನುತೆ ಮುನಿ-
ರಾಯ ಪೇಳಿದನಾ ಮಹಾಯತಿಗಳಿಗೆ ಮನವೊಲಿದು ‖ ೭ ‖

೮ ಜನನಿ ನಿನ್ನಯ ಮುನ್ನಿನ ಸ್ಥಿತಿ-
ಯನು ನನಗೆ ವಿನಯದೊಳೊರೆವುದೆನೆ
ತನುಜೆಗುಸಿರ್ದಳು ಮಾಯೆ ಲಾಲಿಪುದೆಂ[ದನಾ ಸೂತಂ] ‖ ೮ ‖

# ಇಮ್ಮಡಿ ಜಗದೇಕಮಲ್ಲನ ಕಳಸಾಪುರ ಶಾಸನ

ಡಾ|| ಬಿ. ಆರ್. ಹಿರೇಮಠ

ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಕಳಸಾಪುರ ಗ್ರಾಮದಲ್ಲಿ ೧೩-೧೨-೧೯೮೭ ರಂದು ಕೈಕೊಂಡ ಪರಿವೀಕ್ಷಣೆಯ ಮೂಲಕ ನಾಲ್ಕು ಹೊಸ ಶಾಸನಗಳನ್ನು ಸಂಶೋಧಿಸಲಾಯಿತು.[1] ಈ ನಾಲ್ಕು ಹೊಸ ಶಾಸನಗಳು ಕಲ್ಯಾಣ ಚಾಲುಕ್ಯರ ಆಳಿಕೆಗೆ ಸಂಬಂಧಿಸಿದವುಗಳಾಗಿರುತ್ತವೆ. ಇವುಗಳಲ್ಲಿ ಮೂರು ಶಾಸನಗಳು ತ್ರುಟಿತವಾಗಿದ್ದು, ಇಮ್ಮಡಿ ಜಗದೇಕಮಲ್ಲನ ಆಳಿಕೆಯ ಎಂಟನೆಯ ವರ್ಷದ ಶಾಸನ ಮಾತ್ರ ಸುಸ್ಥಿತಿಯಲ್ಲಿದೆ. ಆದ್ದರಿಂದ ಇಲ್ಲಿ ಈ ಒಂದು ಶಾಸನವನ್ನು ಮಾತ್ರ ಪರಿಚಯಿಸಲಾಗಿದೆ.

೨೭ ಸಾಲುಗಳುಳ್ಳ ಈ ಶಿಲಾಶಾಸನ, ಕಳಸಾಪುರ ಗ್ರಾಮದಿಂದ ದಕ್ಷಿಣಕ್ಕೆ ಸುಮಾರು ೨ ಕಿ.ಮೀ. ಅಂತರದಲ್ಲಿರುವ ಮಧ್ವರಾವ ರಾಘವೇಂದ್ರರಾವ ಹಡಗಲಿಯವರ ತೋಟದ ಬಾವಿ ದಂಡೆಯ ಮೇಲಿರುವ ಕಂಬದ ಒಂದು ಮುಖದಲ್ಲಿದೆ.[2] ಶಾಸನ ಅತ್ಯಂತ ಸುರಕ್ಷಿತವಾಗಿದ್ದು, ಅಕ್ಷರಗಳು ಅಂದವಾಗಿಯೂ ಚಿಕ್ಕವಾಗಿಯೂ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಈ ಶಾಸನದ ಬರೆವಣಿಗೆಗಾಗಿ ಕನ್ನಡಲಿಪಿ ಬಳಸಲಾಗಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕ ಮಲ್ಲನು ಆಳುತ್ತಿದ್ದಾಗ ಮಹಾಮಂಡಲೇಶ್ವರ ಹಟ್ಟಗಾರ ಹೆಮ್ಮಾಡಿದೇವರಸನು ಎರಂಬರವಿಯ ನೆಲೆವೀಡಿ

1 ಈ ಸಂಶೋಧನ ಕಾರ್ಯದಲ್ಲಿ ನೆರವಾದ ಗದಗಿನ ಕೆ. ಎಸ್. ಎಸ್. ಕಲಾ ವಾಣಿಜ್ಯ ಮಹಾವಿದ್ಯಾಲಯದ ಪ್ರಾಚಾರ್ಯ ಸಿದ್ದಣ್ಣ ಜಕಬಾಳ ಅವರಿಗೂ ಪ್ರೊ|| ವೆಂಕಟಾಪುರ, ಪ್ರೊ|| ಅಂಬಲಿ ಹಾಗೂ ವಿದ್ಯಾರ್ಥಿ ಮಿತ್ರರಿಗೂ ಅನಂತ ಕೃತಜ್ಞತೆಗಳು.

2 ಉಳಿದ ಮೂರು ಶಾಸನಗಳಲ್ಲಿ ಒಂದು ಇದೇ ತೋಟದಲ್ಲಿಯೂ (ಮೇಲ್ಭಾಗ ಮಾತ್ರವಿದೆ) ಇನ್ನೊಂದು ಕಳಸಾಪುರದ ಹಳೆಯ ಬಾವಿಯ ದಂಡೆಯ ಮೇಲೆಯೂ ಮತ್ತೊಂದು ಇದೇ ಬಾವಿಯ ದಂಡೆಯ ಮೇಲಿರುವ ದೇವಾಲಯದ ನಂದಿವಿಗ್ರಹ ಗದ್ದುಗೆಕಲ್ಲಿನ ಸುತ್ತಲೂ ಇರುತ್ತವೆ.

ನಿಂದ ರಾಜ್ಯಭಾರ ಮಾಡುತ್ತಿದ್ದನು. ಈ ಮಹಾಮಂಡಲೇಶ್ವರನ ಪಾದ ಪದ್ಮೋಪಜೀವಿಯಾದ ಮಹಾಪ್ರಧಾನ ಕೊಡಗದ ರಾಯರಸರ ನೊಮ್ಮಗ ಹೆಗ್ಗಡೆ ನಾರಣಯ್ಯನು ನಾಗವಾವಿ(ನಾಗಾವಿ)ಯ ಸ್ವಯಂಭೂ ಮಹಾಬಲೇಶ್ವರ ದೇವಾಲಯದ ನಂದಾದೀವಿಗೆ ಹಾಗೂ ನೈವೇದ್ಯಗಳಿಗಾಗಿ ಅದರ ಸ್ಥಾನಾಚಾರ್ಯ ಈಶಾನ್ಯಶಕ್ತಿ ಪಂಡಿತರ ಕಾಲಂಕರ್ಚಿ ಹಣದಾನ ಮಾಡಿದುದು ಈ ಶಾಸನದ ಪ್ರಮುಖ ವಿಷಯವಾಗಿದೆ. ಈ ಶಾಸನ ಇಡಿಯಾಗಿ ಗದ್ಯದಲ್ಲಿದೆ. ಸಾಲು ೧೧-೧೩ರಲ್ಲಿ ಬರುವ "ಶ್ರೀ ಮಚ್ಚಾಳುಕ್ಯ ಪ್ರತಾಪ ಚಕ್ರವರ್ತಿ ಜಗದೇಕ ಮಲ್ಲದೇವ ವರ್ಷದ ೮ನೆಯ ಪ್ರಭವ ಸಂವತ್ಸರದ ಚೈತ್ರ ಸು(ಶು)ದ್ಧ ೮ ಸೋಮವಾರ ಸಂಕ್ರಮಣ ವ್ಯತೀಪಾತಂ ಕೂಡಿದ ಪುಣ್ಯತಿಥಿ" ಎಂಬ ಮಿತಿಯು ಕ್ರಿ.ಶ. ೧೧೪೭ ಮಾರ್ಚ ೧೧, ಮಂಗಳವಾರಕ್ಕೆ ಸಮಾನವಾಗಿರುತ್ತದೆ.

ಈ ದಾನಶಾಸನದಲ್ಲಿ ಕಳಸಾಪುರ ಗ್ರಾಮದ ಪ್ರಾಚೀನ ಹೆಸರು 'ಕಾಡಿಯೂರ' ವೆಂದೂ 'ನಾಗಾವಿ' (ಕಳಸಾಪುರದಿಂದ ೩ ಕಿ.ಮೀ. ಅಂತರದಲ್ಲಿದೆ)ಯ ಪ್ರಾಚೀನ ಹೆಸರು 'ನಾಗವಾವಿ'ಯೆಂದೂ ಹೇಳಲಾಗಿದೆ. ನಾಗಾವಿ ಗ್ರಾಮದಲ್ಲಿ ಮಹಾ ಬಲೇಶ್ವರ ದೇವಾಲಯವಿದ್ದುದೂ ಈಶಾನ್ಯಶಕ್ತಿ ಪಂಡಿತ ಈ ದೇವಾಲಯದ ಸ್ಥಾನಾಚಾರ್ಯನಾಗಿದ್ದುದೂ ಪ್ರಸ್ತುತ ಶಾಸನದ ಮೂಲಕ ಪ್ರಥಮ ಬಾರಿಗೆ ಗೊತ್ತಾಗುತ್ತವೆ.

ಪ್ರಾಚೀನ ಕರ್ನಾಟಕದ ಪ್ರಜೆಗಳು ವೀರರಿಗೆ ಸಲ್ಲಿಸುತ್ತಿದ್ದ ತೆರಿಗೆಯ ಹೆಸರು 'ಬೀರವಣ'. ;ಇಲ್ಲಿ ಈ ತೆರಿಗೆಯನ್ನು 'ಎಲೆಯ ಬೀರವಣ' ಎಂದು ಕರೆಯಲಾಗಿದೆ. ಇನ್ನು ಬೇರೆ ಕೆಲವು ಶಾಸನಗಳಲ್ಲಿ ಇದನ್ನು 'ಸಾರಿಗೆಯ ಬೀರವಣ'ವೆಂದೂ ಹೆಸರಿಸಲಾಗಿದೆ. ಹೀಗೆ ಬೀರವಣ ತೆರಿಗೆಯನ್ನು ವೀಳ್ಯದೆಲೆ ಹಾಗೂ ಸಾರಿಗೆಗಳ ಮೇಲೆ ವಿಧಿಸುತ್ತಿದ್ದ ಸಂಗತಿ ನಮಗೆ ಸ್ಪಷ್ಟವಾಗಿ ತಿಳಿದುಬರುತ್ತದೆ.

ನಿಸರ್ಗದ ವಿವಿಧ ಆಘಾತಗಳಿಂದ ಸಂಪೂರ್ಣ ಸವೆದಿರುವ ಇನ್ನೂ ಐದಾರು ಶಿಲಾಶಾಸನಗಳೂ ಆರೇಳು ವೀರಗಲ್ಲುಗಳೂ ಈ ಗ್ರಾಮದಲ್ಲಿರುತ್ತವೆ. ದಿನ್ನೇಶ್ವರ ನೆಂದು ಹೆಸರಾದ ೧೫'-೨೦' ಎತ್ತರದ ಇಲ್ಲಿಯ ಬಾಹುಬಲಿ ವಿಗ್ರಹ ಅತ್ಯಂತ ಅಂದವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ರಾಮೇಶ್ವರ ಮತ್ತು ಈಶ್ವರ (ಸೋಮೇಶ್ವರ) ದೇವಾಲಯಗಳನ್ನೂ ಹಾಳಾದ ಅನೇಕ ಪ್ರಾಚೀನ ದೇವಾಲಯಗಳ ನೆಲೆಗಳನ್ನೂ ಇಲ್ಲಿ ಕಾಣಬಹುದಾಗಿದೆ. ವರ್ಧಮಾನ ಮಹಾವೀರ ಹಾಗೂ ಇತರ ಜಿನವಿಗ್ರಹಗಳೂ ಸೂರ್ಯನಾರಾಯಣ, ನಂದಿ-ಶಿವಲಿಂಗ, ಶಿವ-ಪಾರ್ವತಿ, ಶಾಕಾಂಬರಿಯರ ವಿಗ್ರಹಗಳೂ ಈ ಗ್ರಾಮದಲ್ಲಿ ಅನೇಕ ಸಂಖ್ಯೆಯಲ್ಲಿರುತ್ತವೆ. ಹೀಗೆ ಕಳಸಾಪುರ ಗ್ರಾಮ ಶಾಸನ, ವಾಸ್ತುಶಿಲ್ಪ, ಮೂರ್ತಿ ಶಿಲ್ಪಗಳ ಹಾಗೂ ಜೈನ, ಶೈವ, ವೈಷ್ಣವ, ಶಾಕ್ತ ಧರ್ಮಗಳ ಅಧ್ಯಯನಕ್ಕೆ ಆಗರಸ್ಥಾನವಾಗಿ ನಿಂತಿದೆ.

ಅಪ್ರಕಟಿತವಾಗಿರುವ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕ ಮಲ್ಲನ ಕಳಸಾಪುರದ ಈ ಹೊಸ ಶಿಲಾಶಾಸನ ಈ ಮೂಲಕ ಪ್ರಥಮಸಲ ಬೆಳಕು ಕಾಣುತ್ತಲಿದೆ. ಈ ಶಾಸನದ ಪೂರ್ಣಪಠ್ಯ ಹೀಗಿರುತ್ತದೆ[3] :

೧ ಸ್ವಸ್ತಿ[|*] ಸಮಸ್ತ ಭ್ರು(ಭು)ವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾ ರಾಜಾಧಿರಾ-
೨ ಜ ಪರಮೇಸ್ವ(ಶ್ವ)ರ ಪರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ
೩ ಚಾಳುಕ್ಯಾಭರಣಂ ಶ್ರೀಮತು ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವ-
೪ ರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನ ಮಾನಮಾ ಚಂದ್ರಾ
೫ ರ್ಕ್ಕ ತಾರಂಬರಂ ಸಲುತ್ತಮಿರೆ || ಸಮಧಿಗತ ಪಂಚಮಹಾಸ(ಶ)ಬ್ದಮ-
೬ ಹಾಮಣ್ಡಳೇಸ್ವ(ಶ್ವ)ರಂ ಯಾದವ ಕುಳೋದ್ಭವಂ ಶ್ರೀಮನ್ಮಹಾಮಣ್ಡಳೇಸ್ವ(ಶ್ವ)ರಂ ಹ-
೭ ಟ್ಟಿಗಾಱ ಹೆಮ್ಮಾಡಿದೇವರಸಮೆರಂಬರವಿಯ ನೆಲವೀಡಿನೊ-
೮ ಳೆ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ || ತತ್ಪಾದ ಪ-
೯ ದ್ಮೋಪಜೀವಿ || ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಧಾನಂ ಕೋ-
೧೦ ಡಗದ ರಾಯರಸರ ಮರ್ಮ್ಮಂ ಹೆಗ್ಗಡೆ ನಾರಣಯ್ಯಂಗಳ್ || ಸ್ವ-
೧೧ ಸ್ತಿ[|*] ಶ್ರೀ ಮಚ್ಚಾಳುಕ್ಯ ಪ್ರತಾಪ ಚಕ್ರವರ್ತ್ತಿ ಜಗದೇಕಮಲ್ಲದೇವವ-
೧೨ ರ್ಷದ ೮ನೆಯ ಪ್ರಭವ ಸಂವತ್ಸರದ ಚೈತ್ರ ಸು(ಶು)ದ್ಧ ೮ ಸೋಮ-
೧೩ ವಾರ ಸಂಕ್ರಮಣ ವ್ಯತೀಪಾತಂ ಕೂಡಿದ ಪುಣ್ಯತಿಥಿಯೊಳ್
೧೪ ನಾಗವಾವಿಯ ಶ್ರೀ ಶ್ವ(ಸ್ವ)ಯಂಭು ಮಹಾಬಳೇಸ್ವ(ಶ್ವರ)ದೇವರಾಚಾ-
೧೫ ರ್ಯ್ಯರಪ್ಪ ಈಸಾ(ಶಾ)ನ್ಯಶಕ್ತಿ ಪಂಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂ-
೧೬ ರ್ವ್ವಕಂ ಮಾಡಿ ಬಿಟ್ಟ ಧರ್ಮವೆಂತೆಂದಡೆ | ತಂಮ್ಮಯೆಂಟ್ವಾರದೆ-
೧೭ ಲೆಯ ಬೀರವಣದಧಿಕಾರದೊಳೆ ಕಾಡಿಯೂರ ಠಾಣಾನ್ತರದೊ-
೧೮ ಳ್ ಶ್ರೀ ಮಹಾಬಳೇಸ್ವ(ಶ್ವ)ರ ದೇವರ ನಂದಾದೀವಿಗೆಗೆ ತಿಂಗಳಿಂಗೆ ಪಣ ೧-
೧೯ ದಂ ಬಿಟ್ಟರು | ಮತ್ತಂ ನಾಗವಾವಿಯೆಲೆಯ ಬೀರವಣದೊಳಗೆ ದೇ-
೨೦ ವರ ನೈವೇದ್ಯಕೆ ತಿಂಗಳಿಂಗೆ ಪಣ ೨ ಡಂ ಬಿಟ್ಟರು | ಯಿಂನ್ತೀ ಧರ್ಮ್ಮಮ-
೨೧ ನಾರೊರ್ವ್ವರಧಿಕಾರಕ್ಕೆ ನಡವಧಿಕಾರಿಗಳ್ ತಮ್ಮ ಧರ್ಮ್ಮವಾಗಿ ಪ್ರತಿಪಾ-

---

3 ಮಸಿಯ ಮೂಲಕ ಮಾಡಿಕೊಂಡುಬಂದ ಈ ಶಾಸನದ ಪಡಿಯಚ್ಚನ್ನು ಓದಿ, ಈ ಪಠ್ಯ ಸಿದ್ಧಪಡಿಸಲಾಗಿದೆ.

೨೨ ಳಿಸುವರವರ್ಗ್ಗ ಪ್ರಯಾಗೆ ವಾರಣಾಸಿ ಕುರುಕ್ಷೇತ್ರಂ ಮೊದಲಾಗಿ ಪುಣ್ಯ-
೨೩ ತೀರ್ತ್ಥಂಗಳೊಳೆ ಸಾವಿರ ಕವಿಲೆಯ ಕೋಡುಂ ಕೊಳಗುಮಂ ಪಂಚರತ್ನಂ-
೨೪ ಗಳಲು ಕಟ್ಟಿಸಿ ಚತ್ರ(ತು)ರ್ವ್ವೇದ ಪಾರಗರಪ್ಪ ಬ್ರಾಹ್ಮಣಂಗೆ ಕೊಟ್ಟ ಫ-
೨೫ [ಳ]ಮನೆಯ್ದುವರು || ಯಿಂನ್ತೀ ಧರ್ಮ್ಮಮನುಪೇಕ್ಷೆಗೆಯ್ದುವರ್ಗೆ
೨೬ [ಅ] ಪುಣ್ಯತೀರ್ತ್ಥಂಗಳಲಾ ಕಪಿಲೆಯ್ಮನಾ ಬ್ರಾಹ್ಮಣರುಮ-
೨೭ [ನಳಿದ*] ಮಹಾಪಾತಕನಕ್ಕು ||

# ನಾಂದಣಿಯ ಜಿನಸೇನಮಠದ ಆದಿನಾಥ ಜಿನಾಲಯದ ಶಾಸನ

ಡಾ|| ಎಸ್. ಪಿ. ಪಾಟೀಲ
ಕೆ. ಪಿ. ಈರಣ್ಣ

ಕೊಲ್ಲಾಪೂರ ಜಿಲ್ಲೆಯ ಶಿರೋಳ ತಾಲೂಕಿನ ನಾಂದಣಿ ಗ್ರಾಮದ ಶ್ರೀ ಜಿನಸೇನಮಠದ ಆವರಣದಲ್ಲಿರುವ ಶ್ರೀ ಆದಿನಾಥ ಜಿನಾಲಯದ ಗರ್ಭಗೃಹದ ಜಿನಮೂರ್ತಿಯ ಬಲಭಾಗದ ಗೋಡೆಯ ಕಲಿನಲ್ಲಿ ಕೆತ್ತಿದ ಈ ಶಾಸನವು ೩೪ ಸಾಲುಗಳಷ್ಟು ದೀರ್ಘವಾಗಿದೆ. ಈ ಶಾಸನದ ಮೇಲ್ಭಾಗದ ಮಧ್ಯದಲ್ಲಿ ಪದ್ಮಾಸನ ಜಿನಬಿಂಬ, ಎಡ-ಬಲಗಳಲ್ಲಿ ಸೂರ್ಯ-ಚಂದ್ರ, ಅದರ ಕೆಳಗಡೆ ಪಿಂಛ-ಕಮಂಡಲು, ಆಕಳು-ಕರು ಇದ್ದು, ಮಧ್ಯದಲ್ಲಿ ವೃಕ್ಷವಿದೆ. ಶಾಸನದ ಮೇಲ್ಭಾಗದಲ್ಲಿ ಒಂದು ಸಾಲು ಅಕ್ಷರಗಳಿದ್ದು ತ್ರುಟಿತವಾಗಿವೆ.

ಶಾಸನ ಜಿನಸ್ತುತಿಯಿಂದ ಆರಂಭವಾಗಿದೆ. ತರುವಾಯ ನಂದಾಪುರ (>ನಾಂದಣಿ) ಗ್ರಾಮದ ಭವ್ಯಸಂಘ, ಅಲ್ಲಿನ ಆದಿನಾಥ ಜಿನಾಲಯ, ಅಲ್ಲಿನ ಆದಿ ತೀರ್ಥಂಕರರನ್ನು ಉಲ್ಲೇಖಿಸಿ, ವೃಷಭಸೇನ ಗಣಧರ ಹಾಗೂ ಸೇನಾನ್ವಯ-ಗೌತಮರಿಂದ ಸಿದ್ಧಸೇನರವರೆಗಿನ ಪರಂಪರೆಯ ಆಚಾರ್ಯರಿಗೆ ನಮಸ್ಕರಿಸಲಾಗಿದೆ.

ಗೌತಮ, ಸುಧರ್ಮ, ಜಂಬು—ಮೂವರು ಅನುಬದ್ಧಕೇವಲಿಗಳು (೬೨ ವರ್ಷ); ಧರೋನಂದನ (ವಿಷ್ಣು), ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹು—ಶ್ರುತಕೇವಲಿಗಳು (೧೦೦ ವರ್ಷ) ವಿಶಾಖ, ಪ್ರೋಷ್ಠಿಲ, ಕ್ಷತ್ರಿಯ, ಜಯಸೇನ, ನಾಗ, ಸಿದ್ಧ, ಧೃತಿಸೇನ, ವಿಜಯ, ಬುದ್ಧಿಲ, ಗಂಗದೇವ, ಸುಧರ್ಮ (ಧರ್ಮಸೇನ) ದಶಪೂರ್ವಧಾರಿಗಳು (೧೮೩ ವರ್ಷ); ನಕ್ಷತ್ರ, ಜಯಪಾಲ, ಪಾಂಡು, ಧ್ರುವಸೇನ, ಕಂಸಾಚಾರ್ಯ—ಏಕಾದಶಾಂಗಧಾರಿಗಳು(೧೨೩ ವರ್ಷ); ಸುಭದ್ರ, ಯಶೋಭದ್ರ, ಯಶೋಬಾಹು, ಲೋಹಬಾನು, (ಲೋಹಾಚಾರ್ಯ)—

ಆಚಾರಾಂಗಧಾರಿಗಳು (೯೭ ವರ್ಷ); ಅರ್ಹದ್ಬಲಿ (ಮಾಘಣಂದಿ-ಇಲ್ಲ) ಧರಸೇನ, ಪುಷ್ಪದಂತ, ಭೂತಬಲಿ—ಏಕಾಂಗಧಾರಿಗಳು (೧೧೮ ವರ್ಷ) ಈ ಪ್ರಕಾರ ಶ್ರುತ ಪರಂಪರೆ ಅವಿಚ್ಛಿನ್ನವಾಗಿ ನಡೆದು ಬಂದುದನ್ನು ವಿವರಿಸಲಾಗಿದೆ. ಇವರೆಲ್ಲರಿಗೂ ಹಾಗೂ ಮೂಲ ಸಿದ್ಧಾಂತವನ್ನು ರಚಿಸಿದ ಗುರುಗಳು, ಮೀಮಾಂಸಕರು, ಪ್ರಮೀಮಾಂಸಕರು-ಇವರಿಗೆ ನಮಸ್ಕರಿಸಿ; ತಾರ್ಕಿಕರಾದ ಸಮಂತಭದ್ರರನ್ನು; ಧವಲ, ಮಹಾಧವಲ, ಜಯಧವಲ-ಸಿದ್ಧಾಂತತ್ರಯಗಳ ಕರ್ತೃ ವೀರಸೇನರನ್ನೂ; ಮಹಾಪುರಾಣ-ಕಾವ್ಯವನ್ನು ರಚಿಸಿದ ಶಕೆ ೭೮೮ರ (ಕ್ರಿ. ಶ. ೮೬೬) ಜಿನಸೇನರನ್ನು ಸ್ಮರಿಸಿ, ಅವರ ಪರಂಪರೆಯನ್ನು ಹೇಳಿ-ಅವರ ಶಿಷ್ಯರಾದ ಸ್ವಸ್ತಿಶ್ರೀ ಜಿನಸೇನ ಭಟ್ಟಾರಕ ಮಹಾಸ್ವಾಮಿಗಳು ನಾನಾ ಮಾನಸ್ತಂಭ, ಜಿನಾಲಯ ಮತ್ತು ಶಿಖರ ಗಳನ್ನು ಕಟ್ಟಿಸಿದವರು; ನಿತ್ಯಪೂಜೆ, ರಥೋತ್ಸವಗಳನ್ನು ನಡೆಸಿದವರು. ದಿಲ್ಲಿ, ಕರವೀರ (ಕೊಲ್ಲಾಪುರ) (ಜಿನ) ಕಂಚಿ, ಪೆನುಗೊಂಡೆ ಚತುಃಸ್ಥಾನಾರ್ಯರೆಂಬ ಬಿರುದುಳ್ಳ ಜಿನಸೇನರು ಶಕೆ. ೮೫೭(ಕ್ರಿ.ಶ. ೯೩೫)ರಲ್ಲಿ ನಂದನನಗರ (ನಾಂದಣಿ) ದಲ್ಲಿ ಕಟ್ಟಿಸಿದ ಜಿನಮಂದಿರವನ್ನು ಶಕೆ. ೧೬೭೭(ಕ್ರಿ. ಶ. ೧೭೫೫)ರ ಜಿನಸೇನಾ ಚಾರ್ಯರು ಆದಿಜಿನಾಲಯವನ್ನು ಜೀರ್ಣೋದ್ಧಾರ ಮಾಡಿಸಿ, ಪಂಚಕಲ್ಯಾಣ ಮಹೋತ್ಸವವನ್ನು ವಿಜೃಂಭಣೆಯಿಂದ ಮಾಡಿಸಿದರು. ಈ ಜಿನಾಲಯವನ್ನು ನಾಶಪಡಿಸಿದವರು ಗೋ-ಬ್ರಾಹ್ಮಣ-ಶಿಶು ಹತ್ಯೆಮಾಡಿದ ಪಾಪಕ್ಕೆ ಗುರಿಯಾಗು ತ್ತಾರೆ.

ನಾಂದಣಿ ಗ್ರಾಮವು ಪಂಚಗಂಗಾನದಿ ದಡದಲ್ಲಿದ್ದು, ಸುರಪುರದ ಸುಂದರತೆ ಯನ್ನು ಪಡೆದಿದೆ; ಅದು ಗಿರಿ, ವನ, ದುರ್ಗ, ಬನ, ಬಾವಿ, ಕೆರೆಗಳಿಂದ ತುಂಬಿದು ದಾಗಿದೆ. ಈ ಪುರದ ಮಧ್ಯದಲ್ಲಿ ಜಿನಸೇನ ಭಟ್ಟಾರಕರ ಮಠವಿದ್ದು, ಅದು ಶ್ರಾವಕರಿಂದ ತುಂಬಿದುದಾಗಿದೆ. ಗ್ರಾಮದ ಅಂಗಡಿ, ರಾಜಬೀದಿ, ಉಪ್ಪರಿಗೆ, ಸುಂದರವಾದ ನಿಸಿಧಿಗಳು; ವೈಶ್ಯ, ಬ್ರಾಹ್ಮಣಾದಿ ಸರ್ವಸಮುದಾಯ ಇಲ್ಲಿದ್ದ ಬಗ್ಗೆ ಉಲ್ಲೇಖವಿದೆ.

ಇದೇ ಜಿನಾಲಯದಲ್ಲಿ ಶಕೆ.೧೭೦೦(ಕ್ರಿ.ಶ. ೧೭೭೮)ರಲ್ಲಿ ಅಂದಿನ ಜಿನಸೇನರು ಪ್ರತಿಷ್ಠಾಕಾರ್ಯವನ್ನೂ, ಪಂಚಕಲ್ಯಾಣವನ್ನೂ ಕೈಕೊಂಡು, ಧ್ವಜಾರೋಹಣ, ಮೃತ್ತಿಕಾ ಸಂಗ್ರಹ, ಅಂಕುರೋಪಣ, ನಾಂದಿಮಂಗಲ, ಶಾಂತಿಕ, ಮುನಿರತ್ನ ತ್ರಯಾರಾಧನೆಗಳನ್ನು ಕೈಕೊಂಡರು. ಮುನಿ, ಆರ್ಯಿಕಾ, ಶ್ರಾವಕಾ, ಶ್ರಾವಿಕಾ ಈ ಚತುಸ್ಸಂಘಕ್ಕೆ ಚತುರ್ವಿಧ ದಾನವನ್ನು ಮಾಡಿದವರಿಗೆ ಚತುರ್ಗತಿಯಿಂದ ಬಿಡುಗಡೆ ದೊರೆತು ಮುಕ್ತಿಯು ಲಭಿಸುವುದೆಂದು ತಿಳಿಸುವುದರೊಂದಿಗೆ ಶಾಸನ ಮುಗಿಯುತ್ತದೆ.

ನಾಂದಣಿಯ ಸ್ವಸ್ತಿಶ್ರೀ ಜಿನಸೇನಮಠದ ಆದಿನಾಥ ಜಿನಾಲಯದ ಈ ಶಾಸನವು ಹಲವಾರು ವಿಷಯಗಳ ಮೇಲೆ ವಿಶೇಷ ಪ್ರಕಾಶ ಬೀರುವುದಾಗಿದೆ. ಜೈನ

ಶ್ರುತಪರಂಪರೆಯು ಬೆಳೆದು ಬಂದ ಪರಂಪರೆಯನ್ನು ಈ ಶಾಸನ ವಿವರಿಸುತ್ತದೆ. ಸೇನಗಣಾನ್ವಯದ ಆಚಾರ್ಯರ ಹೆಸರುಗಳನ್ನು ವಿವರವಾಗಿ ತಿಳಿಸುತ್ತದೆ. ಆದರೆ ಈ ಪರಂಪರೆಯು ಹೆಸರುಗಳಲ್ಲಿ ಕೆಲ ಬದಲಾವಣೆಗಳಿರುವುದನ್ನು ಗುರುತಿಸಬಹುದಾಗಿದೆ. ಶ್ರುತಕೇವಲಿಗಳಲ್ಲಿ ವಿಷ್ಣುವನ್ನು ಧರೋನಂದನ ಎಂದು; ಧರ್ಮಸೇನರನ್ನು ಸುಧರ್ಮರೆಂದು, ಲೋಹಾಚಾರ್ಯರನ್ನು ಲೋಹಬಾನು ಎಂದು ಹೆಸರಿಸಿದುದು ಕಂಡುಬಂದರೆ, ಏಕಾದಶಾಂಗಧರರಲ್ಲಿ ಅರ್ಹದ್ಬಲಿ ತರುವಾಯ ಬರಬೇಕಾದ ಮಾಘನಂದಿಯವರ ಉಲ್ಲೇಖವಿಲ್ಲದಾಗಿದೆ. ಇದಕ್ಕೆ ಕಾರಣ ತಿಳಿಯುವದಿಲ್ಲ.

ನಾಂದಣಿ ಗ್ರಾಮದ ವರ್ಣನೆ ವಿವರವಾಗಿ ಬಂದಿದೆ. ಅಲ್ಲಿನ ಜಿನಸೇನ ಭಟ್ಟಾರಕರ ಮಠ ಪ್ರಾಚೀನ ಪರಂಪರೆಯುಳ್ಳ ಮಠವಾಗಿದ್ದು ಆ ಪರಂಪರೆಯ ಗುರುಗಳು ಶಕೆ. ೮೫೭(ಕ್ರಿ. ಶ. ೯೩೫)ರಲ್ಲಿ ಕಟ್ಟಿಸಿದ ಆದಿಜಿನಾಲಯದ ಜೀರ್ಣೋದ್ಧಾರ ಕಾರ್ಯ ಶಕೆ. ೧೬೭೭(ಕ್ರಿ.ಶ. ೧೭೫೫)ರಲ್ಲಿ ಅಂದಿನ ಜಿನಸೇನರಿಂದ ನಡೆದಿದೆ. ಹಾಗೂ ಶಕೆ. ೧೭೦೦(ಕ್ರಿ.ಶ. ೧೭೭೮)ರ ಜಿನಸೇನರು ಕೈಕೊಂಡ ಪ್ರತಿಷ್ಠಾಪನಾ ಕಾರ್ಯ, ಪಂಚಕಲ್ಯಾಣದ ಉಲ್ಲೇಖವು ಇದರಲ್ಲಿ ಬಂದಿದೆ. ಜಿನಸೇನ ಮಠದ ಪರಂಪರೆಯಂತೆಯೇ ಆದಿಜಿನಾಲಯದ ಚರಿತ್ರೆಯನ್ನು ತಿಳಿಸುವ ಮಹತ್ವದ ಉಲ್ಲೇಖವನ್ನೊಳಗೊಂಡ ದಾಖಲೆ ಇದಾಗಿದೆ. ಮೊದಲಿನ ಉಲ್ಲೇಖ ೧೦೫೩ ವರ್ಷಗಳಷ್ಟು ಪ್ರಾಚೀನವಾದರೆ ಕೊನೆಯದು ೨೧೦ ವರ್ಷಗಳಷ್ಟು ಹಿಂದಿನದಾಗಿದೆ.

ಸೇನಗಣದಲ್ಲಿ ಪ್ರಸಿದ್ಧರಾದ ಜನಸೇನಾಚಾರ್ಯರ ಕಾಲ ಶಕೆ. ೭೪೪ (ಕ್ರಿ.ಶ. ೮೨೨) ಎಂಬುದರ ಮೇಲೆ ಈ ಶಾಸನ ವಿಶೇಷ ಬೆಳಕು ಬೀರುತ್ತಿರುವುದು ಗಮನಾರ್ಹ ಅಂಶವಾಗಿದೆ.

ಪಂಚಕಲ್ಯಾಣದ ವರ್ಣನೆ, ಅದರ ವಿಧಿ-ವಿಧಾನಗಳ ವಿವರವೂ ಶಾಸನದಲ್ಲಿ ಬಂದಿರುವುದು ವಿಶೇಷ. ಪುರಾಣ-ಕಾವ್ಯಗಳಲ್ಲಿ ಬರುವ ಪಂಚಕಲ್ಯಾಣದ ಸಂಕ್ಷೇಪ-ಸಾರವತ್ತಾದ ಭಾಗ ಇಲ್ಲಿ ಅಡಕವಾಗಿದೆ. ಅದರಂತೆ ಆಹಾರ, ಅಭಯ, ಭೈಷಜ್ಯ, ಮತ್ತು ಶಾಸ್ತ್ರ—ಈ ಚತುರ್ವಿಧ ದಾನವು ಹುಟ್ಟು ಸಾವುಗಳ ಚಕ್ರದಿಂದ ಮಾನವನನ್ನು ಮುಕ್ತ ಮಾಡುವ ಸಾಧನೆಯೆಂಬುದನ್ನು ಈ ಶಾಸನವೂ ಬೋಧಿಸುತ್ತಿದೆ. ಹೀಗೆ ಶ್ರುತಪರಂಪರೆ, ಸೇನಗಣಾನ್ವಯ, ಜೀರ್ಣೋದ್ಧಾರ-ಪಂಚಕಲ್ಯಾಣ, ಅನೇಕ ಜೈನ ಪಾರಿಭಾಷಿಕ ಪದಗಳು ಮೊದಲಾದ ಸಂಗತಿಗಳನ್ನು ಕುರಿತು ಅನೇಕ ಹೊಸ ವಿಷಯಗಳನ್ನೊಳಗೊಂಡ ಮಹತ್ವಪೂರ್ಣ ಅಪ್ರಕಟಿತ ಶಾಸನವು ಈ ಮೂಲಕ ಪ್ರಪ್ರಥಮಬಾರಿಗೆ ಇಲ್ಲಿ ಪ್ರಕಟವಾಗುತ್ತಿದೆ. ಈ ಶಾಸನದ ಪೂರ್ಣಪಾಠ ಹೀಗಿದೆ:

೧ ಶ್ರೀಮತ್ಪರಮ ಗಂಭೀರಸ್ಯ ಸ್ಯಾದ್ವಾದಾಮೋಘ ಲಾಂಛನಂ | ಜೀಯಾತ್ರಿಲೋಕನಾಥಸ್ಯ ಶಾಸನಂ ಜಿನಶಾಸನಂ || ರಾಜಾರಾಜ್ಯಾರ್ಚಿತಂ ಶ್ರೀಸಕಲ ಬುಧಜನ್ಯ |

೨ [ಶ್ರೀ ವೇನೂನೊಸಮಂತಾದೊಡೆ] ಶ್ರೀ ನಂದಾಪುರ ಭವ್ಯ ಸಂಘಂ ಅನಗಾರಾಗಾರಿ ಮೂರ್ಧಾಂಕಿತಃ ಶ್ರೀಮತ್ಕಮಲ ಪಾದಪದ್ಮಯುಗಲಂ ಸದೃಷ್ಟಿನಂ ಕ್ಷಿತಃ

೩ × ಷ್ಟಾಷ್ಟದಶಸಾಗರೋಪಮ ಇಹಧರ್ಮಂ ಪುನಃ ಶ್ರೀಷ್ಟ × ಸ ಸರ್ವೆ ತೀರ್ಥಕರಾಗ್ರಣಿ ಪುರುಜಿನಃ ತಸ್ಯ ನಮೋ ಭಕ್ತಿತಃ ||೩|| ಆದಿದೇವ[ಸು]ತಃ ಖ್ಯಾತಃ ಆದಿಮೋ

೪ ಗಣನಾಯಕಃ ನಮೋ ವೃಷಭಸೇನಾಯ ಸೇನಾನ್ವಯಾಗ್ರಣಿತತಃ ||೪|| ಸಿಂಹಸೆ[ಸೇ]ನ ಗಣಿಶಾದಿ ಗೌತಮ ಸಿದ್ಧಸೇನಯೊಃ ಪರ್ವಂ ತಮಾಗತಾ ಖ್ಯಾತಃ ನಮೋಸ್ತು ಸುಗಣಸೇ

೫ ನ ||೫|| ಗೌತಮಃ ಸುಧರ್ಮೊಜಂಬುಃ ತ್ರಯೋನುಬದ್ಧಕೇವಲಿಃ | ದ್ವಿಷಷ್ಟಿ ವತ್ಸರೆ ಕಾಲೇ ಜಾತಿಃ ತಸ್ಯಾನುಬದ್ಧತಃ ||೬|| ಸರ್ವಕೃತ ಧರೋನಂದನಂದಿ ಮಿತ್ರಾsಪರಾಜಿ

೬ ತಃ || ಗೋವರ್ಧನಂ ಭದ್ರಬಾಹುಃ ಶತಂ ೧೦೦ ಸಂವತ್ಸರೆ ಅಭೂತ್ |೭|| ವಿಶಾಖ ಪ್ರೋಷ್ಟಿಲ ಕ್ಷತ್ರಿಯ ಜಯಸೇನ ನಾಗಸಿದ್ಧಃ ಧೃತಿಜನೋ ವಿಜಯ ಬುದ್ಧಿಲಃ

೭ ಗಂಗದೇವಃ ಸುಧರ್ಮ ಯತಿ ದಶೈಕ ದಶಪೂರ್ವಧರ ಅಬ್ದಿಕಾಲೇ ಶತಂತ್ರೈ ದೇಕಷಿತಿ ಕ್ರಮೇಣ ಜಾತಃ ||೮|| ನಕ್ಷತ್ರ ಜಯಪಾಲ ಪಾಂಡುಶ್ಚ ಧ್ರುವ ಸೇನಾಚಾರ್ಯ ಕಂಸಾ ಭೈಕಾದಶಾಂಗಜ್ಞ ನಖ್ಯಾಬ್ಧಿ ಕ್ರಪಾಬ ×× |೯|| ಸುಭದ್ರಶ್ಚ ಯಶೋಭದ್ರಃ ಯಶೋ ಬಾಹುಃ ನುಬದ್ಧತಃ | ಲೋಹಬಾನು

೮ ರ್ಜಯ ಮಾಬ್ಧಿಜಾಚಾರಾಂಗ ಧಾರಿಣಿಃ ||೧೦|| ಅಸ್ಯಾಗುಬದ್ಧತಃ ಖ್ಯಾತಃ ಪ್ರತಿಕ್ರಮ ಕ್ರಿಯಾಗ್ರಣಿಃ | ಆಗಾಮಾದಿ ನಿಮಿತ್ತಜಃ ರ್ಹದ್ಬಲಿ ಗುರೋಂ ಭವೇತ್

೯ ||೧೧|| ಅಸ್ಯಾನ್ವಯ ಜಗತಿಖ್ಯಾತ ಶೃತಾಗ್ರಣಿಃ ತಸ್ಯ ಸಿದ್ಧಾಂತಮೂಲ ಯತಿ ಸುಸೂತ್ರ ಕೃತ ಪ್ರದಿಷ್ಟಃ | ಭೂತಾದಿ ಅಂತ್ಯಬಲಿ ಪುಷ್ಪದಂತಾರ್ಯ ತ್ರತಾಃ ದ್ರವ್ಯಶೃ

೧೦ ತಾರಂಭನ[ಶ್ರೀ]ಧರಸೇನ ಸಾರಭೂತ ||೧೨|| ಶ್ರೀ ಸಿದ್ಧಾಂತ ಕೃತಶ್ಚ ಮೂಲ ಗುರುಕೃತ್ಯ ತ್ರಸ್ಯ ವ್ಯಾಖ್ಯತ್ರತಃ | ಮೀಮಾಂಸಾಗ್ರ ಕಾರಕಃ ಸುವಿಧಿ ವಾಙ್ಮಯ

೧೧ ಪ್ರಮೀಮಾಂಸಕಃ || ಗರ್ವೇನಾಂಕಿತ ಸರ್ವವಾದಿ ಶಿರಸಂ ನಂಮ್ರಿಕೃತಂ ಸರ್ವತಃ | ಸರ್ವೆ ತಾರ್ಕಿಕವರ್ಯರಾಜಶ್ರೀ ಸಮಂತಭದ್ರಾಚಾರ್ಯ ಸ್ವಾಮಿರsಭೂತ್ ||೧೩|| ಧವಳಂ

೧೨ ಮಹಾಧವಳಶ್ಚ ವಿಜಯಧವಳಂ ತತಃ ಸಿದ್ಧಾಂತ ತ್ರಯಃ ಕರ್ತಾರಃ ವೀರಸೇನ ಗುರುಭಿರ್ಲೀತ್ ||೧೪|| ಏಕಾಂಗವ್ರತಃ ಲೋಹಬಾಸುಯತಿನಾಂ ಕಾಲೆ ಅ

೧೩ ತಿತೆ ಪುನಃ ದ್ವಿಚತ್ವಾರಿಯುತಂ ಚ ಸಪ್ತಶತ ಸಂವ[ತ್ಸರೆ]ರ್ಷೆ ಅತಿತೆನತಿ ತ್ರಿಷಷ್ಟ್ಯಾದಿಪುರಾಣ ಕಾವ್ಯ ಕರಣ ಮುಖ್ಯ ಭೂವಿಜ್ಞಾತವಾನ್ | ಶ್ರೀವದ್ವೀರ

೧೪ ಗಣಾಗ್ರಣಿ ಪವನತೊ ಜಿನಸೇನಾಚಾರ್ಯಃ ||೧೫|| ತಸ್ಯಾನ್ವಯೆ ಯದಿ ವಿಜ್ಞಾತ ತರ್ಕೆ ಶ[ಮು]ಖ್ಯತಃ ಕಾಸ್ಯಾದಿ ಕ[ಖ]ಂಡ ಕಲಿಕೇತು ಜಿತಾತಿ ವಾದೇನ

೧೫ ವಿದ್ಯಧಿಸಾಗರ ಇತಿ ಪ್ರಾಪ್ತಃ ದ್ವಿತೀಯಂ | ಆಖ್ಯಾನಸ್ಯಸ್ಸವಃಯವಾರ್ ಜಿನಸೇನಾರ್ಯಃ ||೧೬|| ತದ್ವಿದ್ಯಬ್ಧಿ ಕರ್ಣರಾಗ್ರಜಾತವಿನುತ ಸಿವರ್ಣ ಭಟ್ಟಾ

೧೬ ರಕಃ | ನಾನಾ [ಮಾನಾಸ್ತಂಭ] ಚೈತ್ಯ ಜಿನಾಲಯಂ ಜಿನಕೃತ ಶೋಭಾಯ ಶಿಖರಾಂಕಿತಃ | ನಿತ್ಯ ಪೂಜಾ ರಥಾದಿಯು ಬಹುಭಿಃ ಪೂಜಾನುಕಾಲೆ ಸದಾ ಶ್ರೀ ಕೊಲ್ಲಾಪುರ ಭ

೧೭ ವ್ಯರಾಶಿ ವಿನುತಃ ಸ್ಥಾನಾದಿನಾಥಃ ಸುಧಿಃ ||೧೭|| ಶ್ರೀ ದಿಳ್ಳಿ(ದಿಲ್ಲಿ)ಧಿ ಕರವೀರ ಕಂಚಿ ಪಿನಗುಂಡಖ್ಯಃ ಚತುಸ್ಥಾನಾರ್ಯ | ಗಚ್ಛಂ ಪುಷ್ಕರಮಾದಿ ಮುಸ್ತು ಶ್ರೀ ಜಿನ

೧೮ ಸ್ಸೇನೊ ಅತಿತೇನತಿ | ಸಪ್ತ ಪಂಚ ಅಧಿಕ್ಯ ಅಷ್ಟಶತಕಂ ೮೫೭ ಸಖ್ಯಾತ ಭಟ್ಟಾರಕಃ ಪಟ್ಟಾಚಾರ್ಯ ಕೃತ ಪುಷ್ಪಪುರ ತೀರ್ಥೇಶ್ವರಂ (ನಂದನಗರ) ಜಿನಸ್ಸೇನತಃ ||೧೮|| ಶಕರಾ

೧೯ ಜಂ ಪ್ರಕಟಾದಂ ವಿಕಸಿತ ಹದಿನಾರುನೂರರೆಪ್ಪತ್ತೇಳಂ | ಪ್ರಕಟಿಸಿ ಜಿನಸೇನಾರ್ಯಃ ಚಕಚಕಿಸಿ ಮೆರೆದಾದಿದೇವನ ಪೂಜ್ಯರಾ||

೨೦ ೧೯|| ಶಕಸಾವಿರದಾರನೂರು | ಸುಕವಿನುತೆಪ್ಪತ್ತೇಳನೆಯ ವೈಶಾಖಂ | ಪ್ರಕಟಿಸಿ ವ[ಷ]ಸಾ ಮೂರಂ | ವಿಕಸಿದ ದಶಿಮಿ ಋಷಭ ಶುಭ ಲಗ್ನ

೨೧ ದೊಳಂ ||೨೦|| ಇತಿ ಶ್ರೀ ಜಿನಮುನಿ ವಿರಚಿತಂ ಅತಿಶಯದ ಆದಿಜಿನಾಗಾರಂ| ಸತತಂ ಜೀರ್ಣೋದ್ಧಾರಂ | ಅತಿಶಯದಿ ಮಾಡಲಕ್ಕು ಪುಣ್ಯಂ

೨೨ ತ್ರಿಗುಣಂ ||೨೧|| ಪೂರ್ವ್ವಂ ಮಾಡಿದ ಧರ್ಮದ ಗರ್ವ್ವದಿ ಅಳಿಯಲಕ್ಕುಂ ನರಕಾಗಾರಂ | ಸರ್ವ್ವಂ ಯತಿಗೋ ಬಾಲಕಕರ್ವಧೆ ಬ್ರಾಹ್ಮಣಾದಿ ಹತ್ಯೆಯಕ್ಕುಂ ||೨೨||

೨೩ ಪ್ರತಿಮಃ ಕೃತ್ರಿಮಃ ಮಾನಸಂ ಭಂಗ ಜಿನಸೇನಾರ್ಯರು ರಚಿಸಿದರಿಂತು || ತಸ್ಯಾನ್ವಯ ತನುಜಾತಂ ಅತಿಹರುಷದಿ ಪ್ರತಿಷ್ಠೆಯಂ ಮಾಡಿದಂತಾ ||೧||

೨೪ ಶ್ರೀಮನ್ನಂದಾಪುರದೀಶಂ ಸಿಂಹಪೀಠ ನಿವಾಸ ನಮಾಮಿ ಸರ್ವದೇವ ಸಂಸರ್ವಜ್ಞ ಜಗದೀಶ್ವರಂ ||೨||

೨೫ ಶರದಿಗತಿ ದೂರದಲ್ಲಿ ಪರಿವ ಪಂಚಗಂಗಾ ತಡಿಯ ಸುರಪುರಕೆ ಪಳಿವ ನಂದನಗರದ ಸುಂದರತೆಯ ಬಳಲಳ[ ]| ಗಿರಿಯು ದುರ್ಗಂ ವನಂ ಬನದಿಂ ವಾಪಿಂ ಕೋ[ಷ]

೨೬ [ ] ತಟಾಕದಿಂಗಳ ಬಾಗಲ್ವಾಡಮಪುರದ ಮಧ್ಯದಿ ಜಿನಸದನಮಂ ಭಟ್ಟಾರಕರಂ ಮಠವಿ ತುಂಬಿದ ಶ್ರಾವಕ ಜನರುಂ ಕಣ್ಗಳೆರಡು ಸ[ಲ್ಲಿ]ಮ ಪುರದ ಸೊಬಗ ನೋಡುವ ಜನಕೆ ||೪||

೨೭ ಅಂಗಡಿ ರಾಜಬೀದಿಯ ಹರ್ಮ್ಯತು ಸುಂದರವಾದ ನಿಸಿಧಿಯು ದೇಗುಲ ವೈಶ್ಯರು ಬ್ರಾಹ್ಮಣರು ಸೂದ್ರರು ಕೆಳಜಾತಿ ಅಸಂಖ್ಯಾತರು ||೫|| ಯಿಂಬಿಟ್ಟ ದೇವೇಂದ್ರನಂತೆ ಸಂಭ್ರಮ

೨೮ ದಿ ಪೂಜಿಸಿ ಅರ್ಚಿಸಿ × ಸ್ತುತಿಸುವರಲ್ಲದೆ ಅವರ ಗಂಭೀರತೆಯ ×××× ಪ್ರಬುದ್ಧರುಂ ×××× ಜನರ್ಗ್ಗಳಿಗೆ ||೬|| ಶಕ ಸಾವಿರದೇಳ್ನೂರದ ವಿನುತ ವಿಳಂಬಿನಾಮ ಸಂವತ್ಸ

೨೯ ರದ ಮಾರ್ಗಸಿರ ಸುದ್ಧ ಷಷ್ಠಿ ಸೌಮ್ಯವಾರಂ ಶ್ರವಣ[ರ]ನಕ್ಷತ್ರ ನಾಮ ಯೋಗ ಬಾಲವಕರಣಂ ||೭|| ಸೂರ್ಯಾದಿ ರುಕ್ಷಂ ಮನುರಾಧ ಮೇವಾ ಲಗ್ನಸ್ತು ಕುಂಭೆ ರೇವತಿ ಪ್ರಶಸ್ತೆ ಭೃಗುಶ್ಚ ಹೋರ್ಯ [×]

೩೦ ಧರ್ಮಪ್ರಹಾರ್ಯ | ಪಂಚಾಂಗ ಶುದ್ಧಂ ವಿದಿನಂ ಪ್ರತಿಷ್ಠಾಂ ||೮|| ಪ್ರಾರಂಭಂ ಧ್ವಜಾರೋಹಣಂ ಪ್ರತಿದಿನಂ ವೃತ್ತಿಕಾಸಂಗ್ರಹಂ| ಅಂಕುರೋ ಪಣ ನಾಂದಿಮಂಗಲ ವಿಧಿ ನಿಯಮಾನ ಸುದ್ಧಿ ಮಹಾಮ

೩೧ ಸ್ತು ಶಾಂತಿ-ಶಾಂತಿಕಯಾಗಮಂಡಲ ಮುನಿರತ್ನತ್ರಯಾರಾಧನಂ|ಪ್ರಮುಖಂ ವಿಧಾನ ಕರಿತ ಜಿನಸೇನ ಭಟ್ಟಾರಕರಂ ||೯|| ಶ್ರೀಮತ್ಪಂಚಕಲ್ಯಾಣ ಪೂರ್ವಕ ವಿಧಿ | ಗರ್ಭಾವತಾರಂಭರ | ಜ[ನ್ಮಾಭಿಷೇಕ]

೩೨ ಮಹೋತ್ಸವಕರಂ ವೈರಾಗ್ಯ ಕಲ್ಯಾಣಯೋ || ಪೂಜಾನಾಂ ಸಮವಶರಣ್ಯ ವಿಮಲಂ ನಿರ್ವಾಣ ಕಲ್ಯಾಣಮಂ ಇತ್ಯಾದಿ ಜಿನೇಂದ್ರ ಪಾದಯುಗಲಂ ಜಿನಸೇನ ಧರ್ಮ್ಮಗುರುಂ ||೧೦|| ಚತುರ್ಥ ಸಂಘಾಯು ಯ

೩೩ ತಿ ಸಜ್ಜನ ಸ್ವರ್ವ ಗಣ ಕಾರ್ಯ ಋಷಿ ಅರ್ಜಿಕಾ ಶ್ರಾವಕ ಶ್ರಾವಿಕಾ ಭವ್ಯ ಸಮೂಹ || ಯಥಾಯಾನಂ ರಥ[ಚ]ಸದಾ ಇತಿ-ನಿತ್ಯ ಪೂಜಾ| ಕರ್ತೃಯೆ ಯತಿ ಮುನಿಗಣಾಜ್ಜಿನಸೇನ್ಸ್ವರಣ್ಯ ||೧೧|| ಇ ಚತುಸ್ಸಂಘೆ ಸಮೂ

೩೪ ದಾಯಕ್ಕೆ ಅತಿಶಯ ಆಹಾರ ಅಭಯ ಅಷ್ಟಾರ್ಚನ ಶಾಸ್ತ್ರದಾನ ಫಲಂ | ಚತುರ್ಘ್ಗತಿ ನಿವಾರಣಕ್ಕಂ ಕ್ರಮದಿಂ ಮುಕ್ತಿಯ ಪಡೆವರು ಮತಿಮಂತ ಪುರುಷರು ಪೂಜಿಸಿ ಫಲಮಂ ಪಡೆವರು ||೧೨||

---

ಪ್ರಸ್ತುತ ಶಾಸನದ ಪ್ರತಿಯನ್ನು ತೆಗೆದುಕೊಳ್ಳುವಲ್ಲಿ ಹಾಗೂ ಅದನ್ನು ಓದುವಲ್ಲಿ ಸರ್ವರೀತಿಯ ಸಹಾಯ ಸಹಕಾರವನ್ನು ನೀಡಿದ ಪೂಜ್ಯ ಸ್ವಸ್ತಿಶ್ರೀ ಜಿನಸೇನ ಭಟ್ಟಾರಕ ಸ್ವಾಮಿಗಳು, ನಾಂದಣಿ ಮಠ ಅವರಿಗೆ ಕೃತಜ್ಞತೆಗಳು.

# ಕೆಳದಿ ರಾಜ್ಯದಲ್ಲಿ ತುಮಕೂರು ಜಿಲ್ಲೆಯ ಪ್ರದೇಶಗಳು

ಕೆಳದಿ ಗುಂಡಾಜೋಯಿಸ್

ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರದ ನಂತರ ಕೆಳದಿಗೆ ಮಹತ್ವ ಸ್ಥಾನವಿರುವುದನ್ನು ಇತಿಹಾಸ ವಿದ್ವಾಂಸರಾರೂ ಅಲ್ಲಗಳೆಯಲಾರರು. ವಿಜಯ ನಗರವನ್ನು ಹಲವು ರೀತಿಯಲ್ಲಿ ಉನ್ನತ ಸ್ಥಿತಿಗೇರಿಸಿರುವುದು ಕೆಳದಿಯೇ ಎಂಬುದು ಐತಿಹಾಸಿಕ ಸತ್ಯವಾಗಿದೆ. ವಿಜಯನಗರದ ಕೃಷ್ಣದೇವರಾಯನಿಂದ ಆರಂಭಿಸಿ ಶ್ರೀರಂಗರಾಯನ ಕಾಲದವರೆಗೂ ಕೆಳದಿ ಅರಸರು ಬೆಂಗಾವಲಾಗಿ ಸೇವೆ ಸಲ್ಲಿಸಿದ್ದಾರೆ. ದುರದೃಷ್ಟವಶಾತ್ ಕ್ರಿ. ಶ. ೧೫೬೫ರಲ್ಲಿ ಜರುಗಿದ ತಾಳೀಕೋಟೆ ಯುದ್ಧದಲ್ಲಿ ಇವರು ವಹಿಸಿದ ಪಾತ್ರದ ಬಗ್ಗೆ ಐತಿಹಾಸಿಕ ಮೂಲ ಸಾಮಗ್ರಿಗಳು ಅಲಭ್ಯವಾಗಿವೆ. ಕೆಳದಿ ನೃಪವಿಜಯದಲ್ಲಿ ಕವಿ ಲಿಂಗಣ್ಣನು "ರಕ್ಕಸದಂಗಡಿಯೆಂಬ ಸ್ಥಳದಲ್ಲಿ ರಾಮರಾಯರಂ ಪಿಡಿದು ಶಿರಶ್ಛೇದನಂಗೈದು ಆ ಶಿರಮಂ ಕಾಶಿಗೆ ಕಳುಹಿ" ಎಂದು ಉಲ್ಲೇಖಿಸಿದ ಅಂಶವು ಗಮನಾರ್ಹವಾದುದು. ಈ ದಿಶೆಯಲ್ಲಿ ಸೂಕ್ಷ್ಮ ಸಂಶೋಧನೆಯು ಅಗತ್ಯ[1].

ಕ್ರಿ. ಶ. ೧೫೧೪–೧೫೪೬ ರಲ್ಲಿ ಆಳಿದ ಸದಾಶಿವನಾಯಕನು ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನ ಕೇಳಿಕೆ ಮೇರೆಗೆ ಕಲ್ಯಾಣ, ಕಲ್ಬುರ್ಗಿಗಳ ಪಾತುಶಾಹ, ಜಂಬುಖಂಡಿಯ ಬೊಕ್ಕಸಿಂಗ, ಬರೀದ ಪಾತುಶಾಹ ಅಮದಾನಗರದ ನಿಜಾಮಶಾಹ, ಜಿಂಜಿಯ ಕೃಷ್ಣಪ್ಪನಾಯಕ, ಗುತ್ತಿಯ ಸಾಳುವನಾಯಕ,

---

1 ಶಿರವನ್ನು ಬಿಜಾಪುರದ ಚರಂಡಿಯಲ್ಲಿ ಹಾಕಿ ಕೊಳೆ ಸೀದು ಆದರ ಪುನಃ ಅಂತರ ಹೋಗುವಂತೆ ಮಾಡಿದರೆಂದು ಮುಸ್ಲಿಂ ಗ್ರಂಥಗಳು ಹೇಳುತ್ತವೆ. ಪುರಂದರದಾಸರು ಸುರಣವಾದ (ದಿ ೩೧–೧೨–೧೫೬೪) ೨೨ ದಿನಗಳಲ್ಲಿ ಹಾಗೂ ಶ್ರೀ ವ್ಯಾಸರಾಯರ ನಿರ್ಯಾಣದ ನಂತರ ೨೦ ವರ್ಷದಲ್ಲಿ ಈ ಸಂಗತಿ ನಡೆಯಿತು. ಸಂಶೋಧನ ಲೇಖನಗಳು : ೯ ಅ. ಸಂ., ಡಾ॥ ಶ್ರೀಕಂಠಶಾಸ್ತ್ರಿ. ೧೯೬೫, ಡಾ। ಬಿ.ಆರ್. ಗೋಪಾಲ್ ಮತ್ತು ಡಾ ಟ.ವಿ ವಿ. ಶಾಸ್ತ್ರೀ. ಲೇ: ತಾಳೀಕೋಟೆ ಯುದ್ಧದ ಹಿನ್ನೆಲೆ; ವಿಜಯನಗರ ಆಳಿವು ಹೇಗಾಯಿತು, ಪು. ೧೪೨–೧೪೭

ಬಂಕಾಪುರದ ಮಾದಣ್ಣ ಒಡೆಯ, ತುಳುವ ಪ್ರಾಂತದ ಅಧಿಪತಿಗಳೆಲ್ಲರನ್ನೂ ಸೋಲಿಸಿ ಅವರ ಅಧೀನದಲ್ಲಿದ್ದ ಪ್ರದೇಶಗಳೆಲ್ಲವನ್ನೂ ವಿಜಯನಗರದ ಅಧೀನ ಕ್ಕೊಪ್ಪಿಸಿದನು. ೧೫೪೫-೧೫೫೮ ರಲ್ಲಿ ಆಳಿದ ದೊಡ್ಡ ಸಂಕಣ್ಣನಾಯಕನು ಲಿಂಗಣ್ಣ ಕವಿಯೇ ನಿರೂಪಿಸಿದಂತೆ—

ಕಂ|| ಶ್ರೀ ವಿಠ್ಠಲರಾಯರ ಕೂ
ಡಾ ವಿಭುವರನೈದಿ ದಾಳಿವರಿದಂಬುಧಿಮ
ಧ್ಯಾವಷ್ಟಂಭನಮೆನಿಸಿದ
ಗೋವೆಯ ಗಡವಂ ಸವಿಾಕದೊಳ್ ಸಾಧಿಸಿದಂ||

ಗೋವೆಯನ್ನೂ ಸ್ವಾಧೀನಪಡಿಸಿಕೊಂಡು ವಿಜಯನಗರಕ್ಕೆ ದೊರಕಿಸಿ ಕೊಟ್ಟದು ಕಂಡುಬರುತ್ತದೆ. ಇದೂ ಕೂಡ ಸಂಶೋಧನೆಯಲ್ಲಿ ಗಮನಾರ್ಹ ಸಂಗತಿಯಾಗುತ್ತದೆ.

೧೬೪೫-೧೬೬೦ ರಲ್ಲಿ ಆಳಿದ ಶಿವಪ್ಪನಾಯಕನು ವಿಜಯನಗರವನ್ನು ಉದ್ಧ ರಿಸಿ ತನ್ನ ಮೊರೆ ಹೊಕ್ಕ ಶ್ರೀರಂಗರಾಯನನ್ನು ಶತ್ರುಗಳ ಉಪಟಳದಿಂದ ರಕ್ಷಿಸಿ ಅವನಿಗಾಗಿ ಸಕ್ಕರೇಪಟ್ಟಣವನ್ನು ಜಯಿಸಿ, ಸ್ವಾಧೀನಪಡಿಸಿಕೊಂಡು ಅಧಿಕಾರ ವಿತ್ತನು.

ಹೀಗೆ ಆರಂಭದಿಂದಲೂ ಕೆಳದಿ ಅರಸರು ತಮ್ಮ ಸ್ವಾರ್ಥವನ್ನು ಬದಿಗೊತ್ತಿ ವಿಜಯನಗರವನ್ನು ಉದ್ಧರಿಸಿದರು. ಹಲವು ಪಾಳೆಯ ಪಟ್ಟುಗಳನ್ನು ಜಯಿಸಿ, ಆಯಾ ಪಾಳೆಯಗಾರರುಗಳಿಗೇ ಧರ್ಮದಿಂದ ಪ್ರಾಂತ್ಯಗಳನ್ನು ಬಿಟ್ಟುಕೊಟ್ಟು ರಕ್ಷಿಸಿ ಪೋಷಿಸಿಕೊಂಡು ಬಂದರು. ಈ ಅರಸರು ಮನಸ್ಸು ಮಾಡಿದ್ದರೆ ಸಾಮ್ರಾಜ್ಯದ ಬಹು ಭಾಗಗಳು ಇವರ ಅಧೀನದಲ್ಲಿರುತ್ತಿದ್ದುವು. ಇದರಿಂದ ಇವರಿಗೆ ಸಾಮ್ರಾಜ್ಯದಾಹವಿರಲಿಲ್ಲವೆಂಬುದನ್ನು ಕಂಡುಕೊಳ್ಳಬಹುದು.

## ಹಿರಿಯ ವೆಂಕಟಪ್ಪನಾಯಕನ ಅಧೀನದಲ್ಲಿ ಚಿಕ್ಕನಾಯಕನಹಳ್ಳಿ

೧೫೮೬-೧೬೨೯ರಲ್ಲಿ ಆಳಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಕವಿ ಲಿಂಗಣ್ಣನೇ ನಿರೂಪಿಸಿದಂತೆ—

ವ|| ಅದೆಂತೆಂದೊಡೆ ತರಿಕೆರೆಯ ಹಿರಿಯ ಹನುಮಪ್ಪನಾಯಕನ ಸುತ ರಿರ್ವರುಂ ತಂದೆ ಹಸುಗೆಗೆಯ್ದು ಕೊಟ್ಟಂತಿರದೆ ತಮ್ಮೊಳ್ ವಿವಾದಿಸಿ ಪೊಣರ್ದು ಕಿರಿಯಾತಂ ಕಡವೂರಂ ತೆಗೆದುಕೊಳ್ಳಲ್ ಪಿರಿಯಾತನಿಕ್ಕೇರಿಗೆ ಬಿನ್ನೈಸಿ ಕಳು ಪಲ್ ಚಿಕ್ಕ ಕಲ್ಲಪ್ಪನೆಂಬ ದಳವಾಯ ಸಂಗಡಂ ಸೈನ್ಯಮಂ ಕೂಡಿಸಿ ಕಳುಪಲಾ ಚಿಕ್ಕ ಕುಮಾರಂ ಬೇಲೂರ ವೆಂಕಟಾದ್ರಿನಾಯಕರ್ ಮೈಸೂರವರ್ ಚಿಕ್ಕ

ನಾಯಕನಹಳ್ಳಿಯವರ್ ಚಿಂತನಕಲ್ಲವರ್ ಸೀರೆದ ರಂಗಪ್ಪನಾಯಕರ್ ಮುಂತಾದವರ ಸೈನ್ಯಮಂ ಬರಿಸಿಕೊಂಡು ಹೇರಳ ಬಲಮಂ ಮಾಡಿಕೊಂಡಿದಿರ್ಚಿ ನಿಲಲ್ ಪಿರಿಯ ಕುಮಾರಂ ನಿತ್ತರಿಸಿ ನಿಲಲಶಕ್ಯಮಾಗಿ ಮತ್ತಮಿಕ್ಕೇರಿಗೆ ಬಿನ್ನೈಸಿ ಕಳುಪಲಾಗಳಾ ವೆಂಕಟಪ್ಪನಾಯಕಂ ಸೈನ್ಯಸಹಿತಂ ಇಕ್ಕೇರಿಯಿಂ ತಾನೆ ತೆರಳ್ದೈತರಲಾಗಳಾ ಪಿರಿಯ ಕುಮಾರನೆಳ್ತಂದು ಗಂಗೂರೆಡೆಯೊಳ್ ಸಂಧಿಸಿ ಸೀಮೊಗೆ ಗಾಜನೂರು ಲಕ್ಕುವಳ್ಳಿಯ ಸೀಮೆ ಕೋಂಟೆಗಳಂ ಕಾಣಿಕೆ-ರೂಪಾಗಿತ್ತು ಮರೆವುಗಲಭಯಮಿತ್ತು ತುಂಗಭದ್ರಾನದಿಯನುತ್ತರಿಸಲಾ ವಾರ್ತೆಯಂ ಕೇಳ್ದು ಕಿರಿಯ ಕುಮಾರನ ಸಹಾಯಕ್ಕೆ ಬಂದವರ್ ಧೈರ್ಯ ಗುಂದಿ ನಿತ್ತರಿಸಲಾರದೆ ಬಾಣಾವರಕ್ಕಾಗಿ ಪಲಾಯನಂಗೈಯಲಾಗಳಾ ವೆಂಕಟಪ್ಪ ನಾಯಕಂ ಪಿರಿಯ ಲಿಂಗಣನಾಯಕನೆಂಬ ದಳವಾಯಿ ಸಂಗಡಂ ಹೇರಳ ಬಲವಂ ತೆರಳ್ಚಿ ಕಳುಪಲಾತಂ ಕಡೂರ ಕೋಂಟೆಯಂ ವೇಡೈಸಿ ತಳ ಸುರಂಗಗಳಂ ನಡೆಸಿ ತತ್ಕೋಂಟೆಯಂ ತೆಗೆದುಕೊಳಲಾ ಕೋಂಟೆಯಂ ಪಿರಿಯ ಕುಮಾರಂಗಿತ್ತು ಮನ್ನಿಸಿ ಮತ್ತಂ ಬಾಣಾವರಕ್ಕೈದುತಿರಲಾ ವಾರ್ತೆಯಂ ಕೇಳ್ದತ್ಯಂತಭಯೋದ್ರೇಕದಿಂ ಚಿಕ್ಕ ಕುಮಾರನೆಳ್ತಂದು ಮರೆವುಗಲವರಿರ್ವರ ವಿವಾದಮಂ ತೀರ್ಚಿ ಮನಸ್ಸಂಕೋಚಮಂ ಪರಿಹರಿಸಿ ಬುದ್ಧಿಮಾರ್ಗಂಗಳಂ ತಿಳುಪಿಸಿ ಬಳಿಕವರ್ಗಳಿಂದನೇಕದ್ರವ್ಯಾಭರಣಾಂಬರವಸ್ತುವಾಹನಾದಿಗಳಂ ಸಂಗ್ರಹಿಸಿ ಪರಮ ಪ್ರಖ್ಯಾತಿಯಂ ಪಡೆದು ಮರಳ್ದನಂತುಮಲ್ಲದೆಯುಂ—

(ಕೆ. ನೃ. ವಿ. V ಆಶ್ವಾಸ)

ಇದು ೧೫೮೩-೧೬೨೯ರ ವರೆಗೆ ಆಳಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಎರ್ರ ಕೃಷ್ಣಪ್ಪನಾಯಕನ ಮಗ ಬೇಲೂರು ವೆಂಕಟಾದ್ರಿನಾಯಕನು (೧೫೬೬-೧೫೮೪)[2] ಮೈಸೂರಿನ ರಾಜ ಒಡೆಯರು (೧೫೭೮-೧೬೧೭)[3] ಚಿತ್ರದುರ್ಗದ ಇಮ್ಮಡಿ ಮದಕೆರಿನಾಯಕ (೧೬೦೯-೧೬೫೩)[4] ತರೀಕೆರೆಯ ಪಾಳೆಯಗಾರ ಕೆಂಗಪ್ಪನಾಯಕನ ಮಗ ಹಿರಿಯ ಹನುಮಪ್ಪನಾಯಕ (ಕಾಲ?)[5] [ಚಿಕ್ಕನಾಯಕನ ಹಳ್ಳಿಯವರಾದ ಸಾಲಿನಾಯಕ, ಸಂಗಪ್ಪನಾಯಕ, ಚೆನ್ನಬಸವಪ್ಪನಾಯಕ ಮತ್ತು ಮುದಿಯಪ್ಪನಾಯಕರುಗಳ[6] ಪೈಕಿ ಸಂಗಪ್ಪನಾಯಕನು ಈ ಸಂಗ್ರಾಮದಲ್ಲಿ ಪಾಲು

---

2 E.C. Vol. V

3 ದಕ್ಷಿಣ ಭಾರತದ ಇತಿಹಾಸ : ಬಿ. ಮುದ್ದಾಚಾರಿ

4 Mysore Gazetteer, Vol V : H. Rao. P. 1385

5 ತರೀಕೆರೆ ಪಾಳೆಯಗಾರರ ವಂಶೀಕರಲ್ಲಿ ಕೊನೆಯವರಾದ ಶ್ರೀಮಂತ ಯತಿರೋದನು ನಾಗತಿಯಾಪರು ತಮ್ಮ ವಂಶದ ಚರಿತ್ರೆಯನ್ನು ಸಿದ್ಧಪಡಿಸಲು ನನಗೆ ಅಪಾರ ನೆರವಿತ್ತಿದ್ದರು ಸಂಬಂಧದ ಅನೇಕ ಮೂಲ ಸಾಮಗ್ರಿಗಳು ಹಾಗೆಯೇ ಉಳಿದಿವೆ

6 Mysore Gezetteer, Vol. V : H. Rao, P. 407

ಗೊಂಡಿರಬಹುದಾಗಿದೆ]. ಮತ್ತು ರತ್ನಗಿರಿಯ ಸೀರ್ಯದ ರಂಗಪ್ಪನಾಯಕ[7] ಬಾಣಾವರದ ಅಧಿಪತಿ[8] ಮುಂತಾದವರನ್ನು ಸೋಲಿಸಿ ತರೀಕೆರೆಯವರ ಪಾಳೆಯಪಟ್ಟನ್ನು ಹಿರಿಯ ವೆಂಕಟಪ್ಪನಾಯಕನು ಪುನರುದ್ಧರಿಸಿದುದು ಕಂಡು ಬರುತ್ತದೆ.

## ಕೆಳದಿ ಭದ್ರಪ್ಪನಾಯಕನ ಅಧೀನದಲ್ಲಿ ಚಿಕ್ಕನಾಯಕನಹಳ್ಳಿ

೧೬೬೧ ರಿಂದ ೧೬೬೪ರಲ್ಲಿ ಆಳಿದ ಕೆಳದಿ ಭದ್ರಪ್ಪನಾಯಕನ ಕಾಲದಲ್ಲಿ ಲಿಂಗಣ್ಣ ಕವಿಯು ಉಲ್ಲೇಖಿಸಿದಂತೆ—

ವ|| ಇಂತು ಪಣ್ಣಿದ ಯುದ್ಧರಂಗದೊಳಾ ಶಿವಲಿಂಗನಾಯಕಂ ಕಳಿಲೆಯ ಕಾಂತಯ್ಯನದಟಂ ಮುರಿದು ಪಲಾಯನಂಗೊಳಿಸಲಾ ವೇಳೆಯೊಳ್ ವಿಧಿವಶದಿಂ ಶತ್ರು ಸೈನ್ಯದ ಬಾಣಮಪಾಯಸ್ಥಳಕಂತಂಗಿ ಶಿವಲಿಂಗನಾಯಕನಲ್ಲಿಯೇ ಶಿವ ಲೋಕಮಂ ಪಡೆಯಲಾ ವಾರ್ತೆಯಂ ಕೇಳ್ದು ಭದ್ರಪ್ಪನಾಯಕಂ ಪಡೆವೆರ ಸತಿತ್ವರೆಯಿಂವಾಳಿವರಿದಾ ಮಾಯಾವಿಯೊಳ ನಾಡೊಳಗಣ ಹೊನ್ನವಳ್ಳಿ, ಚಿಕ್ಕನಾಯಕನಹಳ್ಳಿ ಕಂದುಗೆರೆ ಬೂದಿಹಾಳ ಮುಂತಾದ ಸೀಮೆಗಳಂ ಕೊಂಡ ವರ ರಾಜ್ಯ ರಾಷ್ಟ್ರಮಂ ಪುಡಿಗೈಸಿ ಮರಳ್ಚಿ ತಂದು ಸುಧಾಪುರದವರ ಗರ್ವೋದ್ರೇಕಮಂ ಮುಗ್ಗಿಸಿ ತದ್ರಾಜ್ಯರಾಷ್ಟ್ರಂಗಳನೀಳ್ದು ಸೈನ್ಯಂ ವೆರಸು ಸಬ್ಬನೀಸ ಕೂಪಪ್ಪಯ್ಯನಂ ತೆರಳ್ಚಿ ದಿವಾಣದ ವಕೀಲಿತಿಯಾದ ಸೀರೆಡೆ ಕೋಂಟೆಗೆ ಮುತ್ತಿಗೆ ಗೈಸಲಾ ಪ್ರಸ್ತಾವದೊಳ್—

(ಕೆ. ನೃ. ವಿ., ೮-viii)

ಶಿವಪ್ಪನಾಯಕನು ಪಟ್ಟಕ್ಕೆ ನಿಲ್ಲಿಸಿದ ಶ್ರೀರಂಗರಾಯನಿಗೆ ಮೈಸೂರು ಒಡೆಯರು ಬೇಲೂರಿಗೆ ಸೇರಿದ ಹೆಬ್ಬಾಳೆ ಕೋಟೆಯನ್ನು ಆಕ್ರಮಿಸಲು ತೊಡಗಿದಾಗ, ಭದ್ರಪ್ಪನಾಯಕನು ತನ್ನ ಅಳಿಯ ಶಿವಲಿಂಗಯ್ಯನ ನೇತೃತ್ವದಲ್ಲಿ ಸೈನ್ಯವನ್ನು ಕಳಿಸಿ ಹೆಬ್ಬಾಳೆ-ಕೋಣನೂರನ್ನು ಸ್ವಾಧೀನಪಡಿಸಿಕೊಂಡನು. ದೊಡ್ಡ ದೇವರಾಜ ಒಡೆಯರು (೧೬೫೯-೧೬೭೨) ಈ ಕಾಲದಲ್ಲಿ ಮೈಸೂರಿನಲ್ಲಿ ಆಳಿದುದು ಕಂಡುಬರುತ್ತದೆ. ದುರದೃಷ್ಟವಶಾತ್ ಶಿವಲಿಂಗನಾಯಕನು ಮೈಸೂರಿನ ದಳವಾಯಿ ಕಳಲೆ ಕಾಂತಯ್ಯನ[9] ಗರ್ವಭಂಗ ಮಾಡಿದ್ದರಿಂದ ಆತನು ಓಡಿ ಹೋಗುವಷ್ಟರಲ್ಲಿ ವಿಧಿವಶದಿಂದ ಬಾಣವೊಂದು ತಾಗಿ ಶಿವಲಿಂಗನಾಯಕನು

---

7 ಅದೇ, ಪು ೫೩೬

8 ಅದೇ. ಪು ೯೨೬

9 See Geneological Table of Kalale Family–History of Mysore, C.H. Rao, Vol. III, P. 1283.

ಮರಣವನ್ನಪ್ಪಬೇಕಾಯಿತು. ಈ ವಾರ್ತೆಯನ್ನು ಕೇಳಿದ ಕೂಡಲೇ ಭದ್ರಪ್ಪ ನಾಯಕನು ಅತಿ ತ್ವರೆಯಿಂದ ಮೈಸೂರವರು ಹಿಡಿದಿದ್ದ ಹೊನ್ನವಳ್ಳಿ,[10] ಚಿಕ್ಕ ನಾಯಕನಹಳ್ಳಿ, ಕಂದುಗೆರೆ,[11] ಬೂದಿವಾಳ ಮುಂತಾದ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಂಡವನು.

ಇದಕ್ಕೆ ಮುಂಚೆಯೇ ೧೬೪೬-೪೭ರಲ್ಲಿ ಜರುಗಿದ ತುರುವೇಕೆರೆ ಸಂಗ್ರಾಮ ದಲ್ಲಿ ಜನರಲ್ ಮುಸ್ತಫಾಖಾನನ ಹಿಡಿತದಿಂದ ಕೆಳದಿ ಶಿವಪ್ಪನಾಯಕನು ವಿಜಯ ನಗರದ ಶ್ರೀರಂಗರಾಯನನ್ನು ರಕ್ಷಿಸಿ ಆಶ್ರಯವಿತ್ತಿದ್ದನು.

### ಸೋಮಶೇಖರನಾಯಕನಿಂದ ಸೀರ್ಯ ಕೋಟೆಯ ಕೈವಶ

ಮ.ವಿ.|| ವರಡಿಳ್ಳೀಶ್ವರನಾಜ್ಞೆಯಿಂದುರೆ ನಿಜಾಮಂ ಲೇಖನಂಗೆಯ್ಸೆ ನೀಂ
ಮಿರಿಜಾ ಅದ್ದಮಖಾನನಂ ತೆಗೆಸಿ ಸೀರೇದುಜ್ವಲತ್ಕೋಂಟೆಯೊಳ್
ಮೆರೆವಾ ತಾಯರಖಾನನಂ ನಿಲಿಪುದೆಂದಟ್ಟಲ್ ಸುಬೇದಾರಶೇ
ಖರನಂ ಲಿಂಗಪನಂ ರಿಪುದ್ವಿಪಮಹೋದ್ಯತ್ಸಿಂಹನಂ ಬೀಳ್ಕೊಡಲ್

ವ|| ಇಂತು ಸುಬೇದಾರ ರೋಹಿಲೆರಂಗನ ಕೋಟೆ ಲಿಂಗಪ್ಪನಂ ತೆರಳ್ಚಿಸಿ ಕಳುಪಲಾತನಸಂಖ್ಯಾತಸೇನೆವೆರಸು ಮಾಯಾವಿಗಳ ನಾಡೊಳಗಣ ಕಂದುಗೆರೆ ಚಿಕ್ಕನಾಯಕನಹಳ್ಳಿಯ ಪ್ರಾಂತದೊಳ್ ಪಾಳೆಯಮಂ ಬಿಡಿಸಿ ಮಿರಿಜಾ ಅದ್ದ ಮಂಗೆ ಸಹಾಯಮಾಗೈದಿದ ಮೈಸೂರವರ ಸೇನಾಸಮೂಹಮಂ ಬಹುಮುಖ ದೊಳ್ ಸಂಹರಿಸಿ ಪಲಾಯನಂಗೊಳಿಸಿ ಮತ್ತಮಲ್ಲಿಂದಂ ತೆರಳ್ದೈದಿ ಸೀರೆದ ಪರಿಸ್ತರಣಕ್ಕೆ ಮುತ್ತಿಗೆಯನಿಕ್ಕಿಸಿ ಕ್ರೋಧಿ ಸಂವತ್ಸರದ ಆಷಾಢ ಶುದ್ಧ ೧೩ಯೊಳ್ ಸೀರೆಯ ಕೋಂಟೆಯುಂ ಕೊಂಡು ಮಿರಿಜಾ ಅದ್ದಮನಂ ವಾರೆದೆಗೆಸಿ ಆ ಸ್ಥಳದೊಳ್ ತಾಯರಖಾನನಂ ನಿಲಿಸಿ[12] ಪಾತುಶಾಹನ ಕಜ್ಜಮಂ ಬಲ್ಪುಗೆಯ್ಸಿ ಬರಲ್ ಬಳಿಕ್ಕಂ ವೇಣುಪುರವರದೊಳೆಡೆವಿಡದೆ ಪಗಲಿರುಳ್ ಮೂರು ದಿನಂಬರಂ ನವಬತ್ತುಗಳ ಸಿನಾದಮಂ ಪೂರ್ಣಂಗೆಯ್ಸಿ ತತ್ಪುರದ ಪ್ರತಿಗೃಹಂ ತಪ್ಪದೆ ಸಕ್ಕರೆಯಂ ತಿದ್ದಿಸಿ ಬಳಿಕ್ಕಂ ಶಾದುಲ್ಲಖಾನನ ಫೌಜುವೆರಸು ಸುಬೇದಾರ ಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲಾತಂ ಪಟ್ಟಣದ ಕೋಂಟೆಯ ಸಮೀಪಮಂ ಸಾರ್ದು ನೀರಜಬಿಯಂ? ಕಟ್ಟಲವರ್ಗಳ್ ಭಯಸ್ಥ

---

10-11 ಹೊನ್ನವಳ್ಳಿಯು ತಿಪಟೂರು ತಾಲ್ಲೂಕಿನಲ್ಲಿಯೂ, ಕಂದುಗೆರೆಯು (ಕಂದಿಕೆರೆ). ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿಯೂ ಇವೆ.

(Mys. Gez. Vol. V, P. 486 & 496)

12 ಕೆ.ನೃ.ವಿ., 'ಗ' ಪ್ರತಿಯಲ್ಲಿ "ಬಳಿಕಾ ಸೀರೆದ ಕೋಂಟೆಯೊಳ್ ತಾಯರ ಖಾನನಂ ಸುಸ್ಥಿರಮಾಗಿ" ಎಂದಿದೆ.

ರಾಗಿ ಪರಸಂಧಾನವುಂ ನಿಶ್ಚಯಿಸಲಾಗಲೆಂದವರ್ಗಳಿಂ ಭೂರಿ ದ್ರವ್ಯಾಭರಣಾಂಬರ ವಸ್ತುವಾಹನಂಗಳಂ ಕೊಂಡು ತಂದೊಪ್ಪಿಸಲೀ ವಾರ್ತೆಯುಂ ಲಿಖಿತ ಮುಖದಿಂ ಚಿಕಲಿಸಖಾನಂಗೆ ತಿಳುಪಲಾ ನಿಜಾಮುಂ ಕೇಳ್ದು ಸಂತಸಂದಳೆದು ಕಳುಹಿದಶ್ವ ಮುಚಿತಮುಡುಗೊರೆಗಳಂ ಪರಿಗ್ರಹಿಸಿ ನಾಲ್ದೆಸೆಯ ದೊರೆಗಳೊಳ್ ಪರಮ ಪ್ರಸಿದ್ಧಿಯುಂ ಪಡೆದೊಡನಾ

ಕಂ|| ಮೆರೆವ ತುರುಸ್ಕರ ವಶವಾ
ಗಿರುವಜ್ಜಂಪುರದ ಪೊಳೆಯುಪೊನ್ನೂರ ಸುವಿ
ಸ್ತರದ ಸಾಸುವೆಯುಹಳ್ಳಿಯು
ವರಕೋಟಾತ್ರಯುವಸಾನೃಪಂ ವಶಗೈದಂ ||

(ಕೆ.ನೃ.ವಿ., ಆ. x)

೧೭೧೪ರಿಂದ ೧೭೩೯ರ ವರೆಗೆ ಕೆಳದಿಯನ್ನಾಳಿದ ಇಮ್ಮಡಿ ಸೋಮಶೇಖರ ನಾಯಕನ ಕಾಲದಲ್ಲಿ ದೆಹಲಿಯ ಬಾದಷಹನು ಸೋಮಶೇಖರನ ಸಹಾಯವನ್ನು ಅಪೇಕ್ಷಿಸಿ ನಿಜಾಮನ ಮುಖಾಂತರ ನಿರೂಪವನ್ನು ಕಳುಹಿಸಿದನು. ೧೭೧೯ರಿಂದ ೧೭೪೮ರ ವರೆಗೆ ದೆಹಲಿಯಲ್ಲಿ ಜಹಾನಶಾನ ಅನಂತರ ಮಹಮ್ಮದ್ ಶಾಹಾನು ಅಧಿಕಾರದಲ್ಲಿದ್ದುದು ಕಂಡು ಬರುತ್ತದೆ. ಈತನು ಆಡಳಿತದಲ್ಲಿ ಅಷ್ಟು ಸಮರ್ಥನಲ್ಲದೆ ಮೊಗಲ್ ಆಧಿಪತ್ಯವು ತನ್ನ ಅಂತ್ಯಕಾಲವನ್ನು ಸಮೀಪಿಸಿತು. ಕರ್ನಾಟಕದಲ್ಲಿ ಏಳು ಪರಗಣಗಳುಳ್ಳ ಬಸವಾಪಟ್ಟಣ, ಬೂದಿಹಾಳ್, ಸಿರಾ, ಪೆನುಕೊಂಡ, ದೊಡ್ಡಬಳ್ಳಾಪುರ, ಹೊಸಕೋಟೆ ಮತ್ತು ಕೋಲಾರ ಪ್ರದೇಶಗಳು ಸಿರಾವನ್ನು ಆಡಳಿತ ಕೇಂದ್ರವಾಗಿಟ್ಟುಕೊಂಡು ೧೬೮೭ರಿಂದ ೧೭೫೮-೫೯ರವರೆಗೆ ಮೊಗಲರು ಆದಿಪತ್ಯ ನಡೆಸುತ್ತಿದ್ದರು. ೧೭೨೪ರಲ್ಲಿ ಬಾದಷಹನು ಕಳಿಸಿದ ನಿಜಾಮನ ರಾಯಭಾರತನದ ಮೇರೆಗೆ ಸಿರಾ ಕೋಟೆ ಮತ್ತು ಪರಗಣಕ್ಕೆ ಮಿರಿಜಾ ಅದ್ದಮ್ ಖಾನನ[13] ಬದಲಾಗಿ ತಾಹಿರ್‌ಖಾನನನ್ನು[14] ಅಧಿಕಾರಕ್ಕೆ ತರಲು ಸೋಮಶೇಖರನು ಸುಬೇದಾರ್ ರೋಹಿಲೆಗಂಗನ ಕೋಟೆ ಲಿಂಗಪ್ಪನ ನೇತೃತ್ವದಲ್ಲಿ ಸೀರ್ಯವನ್ನು ಸ್ವಾಧೀನಪಡಿಸಿಕೊಳ್ಳಲು ಸೈನ್ಯವನ್ನು ಕಳುಹಿಸಿದನು. ಹೈದರಾಬಾದ್ ರಾಜ್ಯ ಸ್ಥಾಪಕನಾದ ನಿಜಾ-ಉಲ್-ಮುಲ್ಕ್ ಈ ಕಾಲದಲ್ಲಿದ್ದುದು ಕಂಡುಬರುತ್ತದೆ.[15] ಮೈಸೂರು

---

13 ಅದ್ದಮ್‌ಖಾನನಿಗೆ ಅಮೀನ್‌ಖಾನನೆಂಬುದಾಗಿಯೂ ಹೆಸರಿದ್ದುದು ಕಂಡುಬರುತ್ತದೆ. History of Mysore. C H Rao, Vol. II, P. 23

14 ಅಬುಲ್ ನಬಿ ತಾಹಿರ್‌ಖಾನ್, (ಅದೇ.)

15 History of India: N K. Sinha & A. C. Banerjee, 1944, P. 459. ಶ್ರೀ ಕೂಡ್ಲಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಸಂಗ್ರಹ (೧೯೬೫). ಪು. ೩೭ ನೋಡಿರಿ.

ಒಡೆಯರೂ ಕೂಡ ಅದ್ದಮ್ ಖಾನನ ಜೊತೆಗೂಡಿ ಕೆಳದಿಯ ಸೈನ್ಯಕ್ಕೆ ವಿರುದ್ಧವಾಗಿ ಹೋರಾಟಕ್ಕೆ ನಿಂತರು. ೧೭೧೪ರಿಂದ ೧೭೩೨ರವರೆಗೆ ಈ ಕಾಲದಲ್ಲಿ ಒಂದನೆಯ ದೊಡ್ಡ ಕೃಷ್ಣರಾಜ ಒಡೆಯರು ಮೈಸೂರಿನ ಅಧಿಪತಿಯಾಗಿದ್ದರು. ಮೈಸೂರಿಗೆ ಸೇರಿದ್ದ ಕಂದುಗೆರೆ ಹಾಗೂ ಚಿಕ್ಕನಾಯಕನಹಳ್ಳಿ ಪಾಳೆಯ ಬಳಿ ಉಭಯತರಿಗೂ ಹೋರಾಟ ನಡೆಯಿತು. ಕೆಳದಿ ಸೈನ್ಯವು ೨೩-೬-೧೭೨೪ರಲ್ಲಿ ಮಿರಿಜಾ ಆದಂನ ಸಹಾಯಕ್ಕೆ ಬಂದ ಮೈಸೂರು ಸೈನ್ಯವನ್ನು ಸೋಲಿಸಿ, ಓಡಿಸಿ, ಶಿರಾ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಮಿರಿಜಾ ಅದ್ದಂಗೆ ಬದಲಾಗಿ ತಾಹಿರ್ ಖಾನನನ್ನು ಅಧಿಕಾರಕ್ಕೆ ಕೂರಿಸಿದರು.[16] ಈ ವಿಜಯದ ಸಂಕೇತವಾಗಿ ಕೆಳದಿ ರಾಜಧಾನಿಯಲ್ಲಿ ಹಗಲಿರುಳೂ ಮೂರು ದಿನಗಳವರೆಗೆ ನವಬತ್ತು ನಿನಾದಗಳನ್ನು ವೈಭವದಿಂದ ಜರುಗಿಸಿ ಪ್ರತಿ ಮನೆಗೂ ಹೇರಳವಾಗಿ ಸಕ್ಕರೆಯನ್ನು ಹಂಚಲಾಯಿತು.

ಇದನ್ನು ಕೇಳಿದ ನಿಜಾಮನು ಮತ್ತು ದೆಹಲಿಯ ಬಾದಷಹನು ಅಶ್ವರಥ ಭೂರಿದ್ರವ್ಯಾಭರಣಾಂಬರ ವಸ್ತುವಾಹನ ಹಾಗೂ ಅಮೂಲ್ಯ ಉಡುಗೊರೆಗಳೊಂದಿಗೆ ಕೆಳದಿ ರಾಜಧಾನಿಗೆ ಬಂದು ನಾಯಕನನ್ನು ಸನ್ಮಾನಿಸಿದನು. ಈ ರೀತಿ ಸೋಮಶೇಖರನು ಉಡುಗೊರೆಯನ್ನು ಸ್ವೀಕರಿಸಿ ಭಾರತದಲ್ಲಿಯೇ ಪ್ರಸಿದ್ಧಿಯನ್ನು ಪಡೆದನು.

ಸುಬೇದಾರ್ ಲಿಂಗಪ್ಪ ಮತ್ತು ಷಾದುಲ್ಲಾ ಖಾನನೊಡನೆ ಕೆಳದಿ ಅರಸನು ಇದೇ ಕಾಲದಲ್ಲಿ ಶ್ರೀರಂಗಪಟ್ಟಣದ ಮೇಲೆ ಹೊರಟು ಸಾಹಸದಿಂದ ಜೇಜೇಕೋಟೆಯನ್ನು ಹಿಡಿದುಕೊಂಡನು. ಮೈಸೂರು ಒಡೆಯರು ಸಂಧಾನ ಮಾಡಿಕೊಂಡು ಹೇರಳ ದ್ರವ್ಯಗಳನ್ನೂ ಹಾಗೂ ವಸ್ತು ವಾಹನಾದಿ ಉಡುಗೊರೆಗಳನ್ನು ತಂದೊಪ್ಪಿಸಿದರು. ಐಗೂರು, ವಸ್ತಾರ ಕೆಳದಿಗೆ ಸೇರಿತು.[17] ನಿಜಾಮನು ಅತ್ಯಂತ ಸಂತೋಷಗೊಂಡು ತುರುಕರ ವಶದಲ್ಲಿದ್ದ ಅಜ್ಜಂಪುರ, ಹೊಳೆಹೊನ್ನೂರು ಮತ್ತು ಸಾಸುವೆಹಳ್ಳಿಯನ್ನು ಕೆಳದಿ ನಾಯಕನಿಗೆ ಕಾಣಿಕೆಯಾಗಿತ್ತನು.

## ಮಧುಗಿರಿ ಕೋಟೆಯಲ್ಲಿ ರಾಣಿ ವೀರಮ್ಮಾಜಿ

೧೭೬೩ರಲ್ಲಿ ಕೆಳದಿ ರಾಜ್ಯದ ಸಂಪತ್ತು ಹಾಗೂ ವೈಭವವನ್ನು ಬೇಹುಗಾರರಿಂದ ಕೇಳಿ ತಿಳಿದಿದ್ದ ನವಾಬ್ ಹೈದರಾಲಿಯು ಕೆಳದಿ ರಾಜ್ಯಕ್ಕೆ ಮುತ್ತಿಗೆ ಹಾಕಲು ಪಿತೂರಿ ನಡೆಸಿದನು. ರಾಣಿ ವೀರಮ್ಮಾಜಿಯು ಸವಣೂರು ನವಾಬ ಅಬ್ದುಲ್ ಹಕೀಂ ಖಾನನ ಸಹಾಯವನ್ನು ಪಡೆದುಕೊಂಡು ಹೈದರನನ್ನು ಎದುರಿಸಿದಳು. ಹೈದರನಿಗೆ ಇದು ನುಂಗಲಾರದ ತುತ್ತಾಯಿತು. ವಾಮ ಮಾರ್ಗದಿಂದ ಕೆಳದಿ

---

16 History of Mys··re: C H. Rao· V·l· II, P- 24

17 Mysorc Gazetteer : C· H. Rao· Vol· V, P. 1099

ರಾಜಧಾನಿಗೆ ಮುತ್ತಿಗೆ ಹಾಕಿ ಸ್ವಾಧೀನ ಪಡಿಸಿಕೊಂಡು, ತಾತಿಶಹ ಎಂಬ ಪೀರ ಜಾದೇರ ಮುಖಾಂತರ[18] ರಾಣಿ ವೀರಮ್ಮಾಜಿಯನ್ನು ಸೆರೆಹಿಡಿದು ಮಧುಗಿರಿಯಲ್ಲಿ ಸೆರೆಮನೆಯಲ್ಲಿರಿಸಿದನು. ೧೭೬೪ರಲ್ಲಿ ಮರಾಟಾ ಸೈನ್ಯದೊಂದಿಗೆ ಮಾಧವರಾಯನು ಮಧುಗಿರಿಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡು ರಾಣಿ ವೀರಮ್ಮಾಜಿ ಮತ್ತು ಪರಿವಾರದವರನ್ನು ಸೆರೆಯಿಂದ ಬಿಡುಗಡೆ ಮಾಡಿದುದು ದಿನಾಂಕ ೧೭-೩-೧೭೬೭ರ ಈ ಕೆಳಗಿನ ಪೇಷ್ವೆ ದಫ್ತರದ ಚಾರಿತ್ರಿಕ ದಾಖಲೆಗಳಿಂದ ವ್ಯಕ್ತಪಡುತ್ತದೆ.

ನಂ. ೪೦ ಶ್ರೀ ಫಾಲ್ಗುಣ ವಧ ೭ ಶಕೆ ೧೬೮೮
೧೭ ಮಾರ್ಚ ಇ. ೧೭೬೭

ರಾಜಶ್ರೀಯಾ ವಿರಾಜಿತ ರಾಜಮಾನ್ಯ ರಾಜಶ್ರೀ ಹರಿಪಂತ ಸ್ವಾಮಿಚೆ ಸೇವೇಸಿ,*

ಪೋಷ್ಯ ವೆಂಕಾಜಿ ನಿರಕಲಕೇರಿ ಸಾಷ್ಟಾಂಗ ನಮಸ್ಕಾರ ವಿನಂತಿ ಯೇಥೀಲ ಕ್ಷೇಮ ಫಾಲ್ಗುಣ ವಧ ೨, ಜಾಣೂನ ಸಾನಂದಲೇಸ್ವನ ಕರೀತ ಅಸಿಲೆ ಪಾಹಿಜೆ. ಯಾನಂತರ ಶ್ರೀಮಂತ ರಾಜಶ್ರೀ ರಾವಸಾಹೇಬ ಸಿರೆ ಘೇವೂನ ಮದಗಿರೀ ಕಿಲೆ ಸಹಜಾತ ಫತೆ ಕೇಲೀ. ರಾಜಾ ವಾ ರಾಣೀಚ ಬಂದ ಸ್ವಲಾಸ ಕೇಲೇ. ಶತ್ರು ಚಾ ಪರಾಭವ ಸರಕಾರಚ ಫತೆ ಜಾಹಲೀ. ವರ್ತಮಾನ ಯೈಕೂನ ಬಹೂತ ಸಂತೋಷ ಪಾವಲೋ. ತೀರ್ಥರೂಪ ಉಭಯೇತಾ ವಿಶೀಂ ಪ್ರಯತ್ನ ಮಾಘ ಆಪಣ ಕೇಲೀ. ಪರಂತು ಕಾಮಾನುಸಾರ ನ ಘಡಲ. ಹಾಲೀ ಸಮಯೋ ಪೂರ್ತಿ ಸಂಭವಿಲ ಆಹೇ. ಯೇ ವೀಸಿ ಅಗತ್ಯ ವಾದ ಆಪಣಾಸ ಆಹೇ. ಜ್ಯಾ ಪ್ರಕಾರೇ ಸುಟಕಾವ ಹೋಮೋ ತೋ ಪ್ರಯತ್ನ ಕರೂನ ಯೇಷ ಘೇತಲ ಪಾಹಿಜೆ. ಆಪ್ಪಾಹಿ ಕೆಂಚನಗುಡ ಸುಮಾರೆ ಯೇಣಾರ ಹೋತೆ. ಪರಂತು ಚಿರಂಜೀವ ಭೀಮೋಪಾಸ ಕೇವಲ ನಿಷ್ಟಂಕ ಹೋವೂಣ ವಾಚತೀಲ ಹಾ ಭರವಸಾ ನ ಜಾಹಲೀ. ಕಾಂಹೀ ಸುಚೇನಾ ಯಾಜಕರಿತಾ ರಾಹಿಲ ಹೋತೊ. ಆತಾಂ ಆಮಳಸ ಗುಣಮುಖ ಆಹೇ, ನಿತ್ರಾಣ ಫಾರಚ ಆಹೇ. ಧನ್ವಂತರೀ ಗುಣ

---

18 Mac. Coll, 351, P. 531–542, British Museum. ಇದನ್ನು ಒದಗಿಸಿದ ಡಾ॥ ಕಲ್ಬುರ್ಗಿ ಹಾಗೂ ವೆಂಕಟೇಶ ಜೋಯಿಸ್ ಇವರುಗಳಿಗೆ ಕೃತಜ್ಞತೆ ಸಲ್ಲಿಸುವೆನು.

* Selections from the Peshwa Daftar, New Series, Vol. 3 by Dr. P.M. Joshi, P. 28

ಹೋಯೀಲ ವೃಂಣ್ಣನ ಸಾಂಗತಾತ. ಇತಃಪರ ಕೋಣತೇಹಿ ಸ ಪಾಹತಾ ಸ್ವಾರ ಹೋಊನ ಯೇತೋ. ನಿಮಿತ್ಯಾಸ ಮಾತ್ರ ಅಷ್ಠಿ ಯಾವೇ. ಉಭಯೇತಾಚ ಸುಟಕಾ ವ ಯೇಷ ಆಪಲ್ಯಾ—ಸಚ ಆಹೇ. ಕೃಪಾ ಕರಾವಿ ಹೇ ವಿನಂತಿ.

Note: Venkappa Nikalkeri writing to Haripanth Phadke communicates the capture of Sira and Madgiri and release of Royal couple of Bednur from the custody of Hydar Ali by the Peshwa.

## ಉಪಸಂಹಾರ

ಕೆಳದಿ ಅರಸರು ವಿಜಯನಗರದ ಅಂತ್ಯಕಾಲದಲ್ಲಿ ಶ್ರೀರಂಗರಾಯನಿಗೆ ಮಾಡಿದ ಉಪಕಾರದಂತೆ ದೆಹಲಿಯಲ್ಲಿ ಮೊಗಲ್ ಆಳ್ವಿಕೆಯ ಅಂತ್ಯಕಾಲದಲ್ಲಿಯೂ ಬಾದಷಹನಿಗೆ ಸಹಾಯ ಮಾಡಿದುದು ಗಮನಾರ್ಹವಾದುದು. ಶಿವಾಜಿಯು ಕೆಳದಿ ರಾಜ್ಯಕ್ಕೆ ದಾಳಿ ಮಾಡಿದ್ದರೂ ಅದನ್ನು ಚೆನ್ನಮ್ಮಾಜಿಯು ಪರಿಗಣಿಸದೆ ರಾಜಾರಾಮನಿಗೆ ರಕ್ಷಣೆ ನೀಡಿದಂತೆ, ದೆಹಲಿಯ ಬಾದಷಹ ಔರಂಗಜೇಬನಿಂದ ಕೆಳದಿಗೆ ಹಲವು ಹಾನಿಯುಂಟಾದರೂ ಅದನ್ನು ಗಮನಕ್ಕೆ ತಾರದೆ ಈ ಅರಸರು ಧಾರ್ಮಿಕ ರೀತಿಯಲ್ಲಿ ನಡೆದುಕೊಂಡ ಸಂಗತಿಯು ಶ್ಲಾಘನೀಯವಾದುದು. ಮನಸ್ಸು ಮಾಡಿದ್ದಲ್ಲಿ ಸೀರ್ಸ್ಯದ ಆಧಿಪತ್ಯವನ್ನೂ ಇವರು ಪಡೆಯಬಹುದಾಗಿತ್ತು. ಅದಕ್ಕೆ ಕೈಹಾಕದೆ ಸ್ಥಿರವಾದ ಆಡಳಿತಕ್ಕೆ ದಾರಿ ಮಾಡಿಕೊಟ್ಟುದು ಕೆಳದಿ ಅರಸರ ಹಿರಿಮೆಗೆ ಸಾಕ್ಷಿಯಾಗಿದೆ.

ಇಂಗ್ಲೆಂಡಿಗೂ ಹೆಚ್ಚಾದ, ಹಿಂದಿನ ಮೈಸೂರು ಸಂಸ್ಥಾನದ ಪರಿಮಾಣದ ಗಾತ್ರವನ್ನುಳ್ಳ ಕೆಳದಿ ರಾಜ್ಯವು ಶಿವಮೊಗ್ಗ, ಚಿಕ್ಕಮಗಳೂರು, ಕಾರವಾರ, ಹಾಸನ (ಭಾಗ), ಚಿತ್ರದುರ್ಗ (ಭಾಗ), ತುಮಕೂರು (ಭಾಗ), ದಕ್ಷಿಣ ಕನ್ನಡ, ಉತ್ತರ ಕನ್ನಡ (ಭಾಗ), ಕಣ್ಣಾನೂರು (ಕೇರಳ) ಜಿಲ್ಲೆಗಳನ್ನೊಳಗೊಂಡ ದೊಡ್ಡ ಸಂಸ್ಥಾನವಾಗಿತ್ತು. ಹೈದರಾಲಿಯ ದಾಳಿಗೆ ಇದು ತುತ್ತಾಗದಿದ್ದಲ್ಲಿ ಭಾರತದ ಭೂಪಟದಲ್ಲಿ ಕೆಳದಿಯ ಸ್ವರೂಪವೇ ವಿಭಿನ್ನವಾಗುತ್ತಿತ್ತೆಂಬುದನ್ನು ಯಾವ ವಿಚಾರಶೀಲ ಇತಿಹಾಸ ವಿದ್ವಾಂಸನೂ ಅಲ್ಲಗಳೆಯಲಾರನು. ಇದು ಕನ್ನಡಿಗರ ದುರ್ದೈವ.

---

ತುಮಕೂರಿನಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿ ವಿಚಾರ ಸಂಕಿರ್ಣದಲ್ಲಿ ಸಾದರ ಪಡಿಸಿದ ಪ್ರಬಂಧ.

# ರ್‍ಯಾಣಗಳು: ವೈಖರಿಯ ವಿಶ್ಲೇಷಣೆ ಮತ್ತು ಸ್ಥಾನ

ಡಾ॥ ಅರವಿಂದ ಮಾಲಗತ್ತಿ

೧೯೮೩ರಲ್ಲಿ ರ್‍ಯಾಣಗಳ ಕುರಿತ ಒಂದು ಪುಟ್ಟ ಸಂಗ್ರಹದ ಕೃತಿ ಪ್ರಕಟವಾಗಿದೆ.[1] ಇದಲ್ಲದೆ ಕೆಲ ಡೊಳ್ಳಿನ ಹಾಡಿಗೆ ಸಂಬಂಧಿಸಿದ ಕೃತಿಗಳಲ್ಲಿ ಬಿಡಿಬಿಡಿಯಾಗಿ ಸಂಗ್ರಹವಾಗಿರುವುದು ಕಂಡು ಬರುತ್ತದೆ.[2] ಆದರೆ ಇವುಗಳ ಕುರಿತು ಹೆಚ್ಚಿನ ವಿವರ ಅಥವಾ ಅಧ್ಯಯನವನ್ನು ನೀಡುವ ಪ್ರಬಂಧಗಳಾಗಲಿ ಕೃತಿಗಳಾಗಲಿ ಇನ್ನೂ ಬಂದಿಲ್ಲ.[3] ೧೯೮೩ರಲ್ಲಿ ಸಂಗ್ರಹವಾದ ಬಸವಗೌಡ ಪಾಟೀಲರ ಕೃತಿಯಲ್ಲಿ ಸಂಪಾದಕೀಯ ಕೆಲ ಟಿಪ್ಪಣಿಗಳಿದ್ದು ಮುನ್ನುಡಿಯಲ್ಲಿಯೂ ಕೆಲ ಪೂರಕವೆನ್ನಬಹುದಾದ ವಿಷಯಗಳನ್ನು ಒಳಗೊಂಡಿದೆ. ಆದರೆ ಜನಪದ ಸಾಹಿತ್ಯದಲ್ಲಿ ರ್‍ಯಾಣಗಳು ಸ್ವತಂತ್ರ ರೂಪ ಎಂದು ಗುರುತಿಸಿಕೊಳ್ಳುವುದು ಅಗತ್ಯ.

## ರ್‍ಯಾಣ ಎಂದರೇನು?

'ರ್‍ಯಾಣ' ಎಂದರೆ: ಡೊಳ್ಳು ವಾದ್ಯವನ್ನು ಕೈ ಪೆಟ್ಟಿನೊಂದಿಗೆ ನುಡಿಸುತ್ತ, ವಿಶಿಷ್ಟವಾದ ಲಯದೊಂದಿಗೆ ಹೇಳಿಕೊಂಡು ಹೋಗುವ ಹಾಡು. ಈ ರ್‍ಯಾಣವನ್ನು ಹೇಳುವವನೊಬ್ಬನಾದರೆ ರ್‍ಯಾಣದ ಲಯಕ್ಕೆ ಸ್ಫುಟಕೊಟ್ಟು ರ್‍ಯಾಣವನ್ನು ಮುಂದುವರಿಸಲು ಸಹ ಹಾಡುಗಾರ ಮಧ್ಯದಲೆ ಅಣ್ಣಣ್ಣ.... ಅಣ್ಣಣ್ಣ ಎಂದು ಹೇಳುತ್ತ ಹೋಗುತ್ತಾನೆ. ಈ ರ್‍ಯಾಣಗಳು ಹೆಚ್ಚಾಗಿ ಶೃಂಗಾರ ಮತ್ತು ಹಾಸ್ಯ ರಸಕ್ಕೆ ಸಂಬಂಧಪಟ್ಟವುಗಳಾಗಿದ್ದು, ಡೊಳ್ಳಿನ ದೊಡ್ಡ ದೊಡ್ಡ ಹಾಡುಗಳ

---

1 ಸಂ: ಬಸನಗೌಡ ಪಾಟೀಲ: ಹೀಂಗ ಬಿಟ್ರ ದೇಶಾ ಆಳ್ಯಾಳ—೨-೪೮

2 ಸಂ: ವಿರೂಪಾಕ್ಷಗೌಡ, ಇತರರು: ನಡಿಯುಪ್ಪ ನಮ್ಮ ನಾಡಿಗೆ—೪೩ ಮತ್ತು ೫೫

3 ಸಂ: ಅರವಿಂದ ಮಾಲಗತ್ತಿ: ಸ್ಥಳೀಯ ಐತಿಹ್ಯಗಳು—೧-೧೩. ೧೯೮೦ರಲ್ಲಿ ಎಂ.ಎ. ಪದವಿಗೆ ಸಾದರಪಡಿಸಿದ ಸಂಪ್ರಬಂಧದಲ್ಲಿ ಐದು ದೀರ್ಘವಾದ ರ್‍ಯಾಣಗಳನ್ನು ಸಂಗ್ರಹಿಸಿ ವಿವರಣೆಯೊಂದಿಗೆ ಕೊಡಲಾಗಿದೆ.

ಮಧ್ಯದಲ್ಲಿ ಹೇಳಲಾಗುತ್ತದೆ. ಆದರೆ ಸರಾಗವಾಗಿ ರ್‍ಯಾಣಗಳನ್ನೇ ಹೇಳಿಕೊಂಡು ಹೋಗುವ ಪ್ರಸಂಗಗಳು ಇರುವುದಿಲ್ಲ. ರ್‍ಯಾಣಗಳು ಸಂದರ್ಭದಲ್ಲಿ—ಬಯಲಾಟ ದಲ್ಲಿ ಅಡ್ಡಸೋಗುಗಳು ಪಾತ್ರವಹಿಸಿದಂತೆ ಡೊಳ್ಳಿನ ಹಾಡುಗಳ ಮಧ್ಯದಲ್ಲಿ ಬೇಸರ ಕಳೆಯಲು ರ್‍ಯಾಣಗಳನ್ನು ಹೇಳಲಾಗುತ್ತದೆ. ಈ ರ್‍ಯಾಣಗಳು ಯಾವುದೋ ಘಟನೆ, ಪ್ರಸಂಗ ಅಥವಾ ಕಥಾನಕಗಳನ್ನೂ ವಸ್ತುವನ್ನಾಗಿಸಿಕೊಂಡಿರುತ್ತವೆ.

ಇಂತಹ ಈ ರ್‍ಯಾಣಗಳಿಗೆ— ರೋಣ, ಕೈಪೆಟ್ಟು, ದಿಡಗ (?) ಹುಲ್ಲುಲ್ಲುಗ್ಯೊ, ಒಗಟಿನ ಕಥೆ ಈ ಹೆಸರುಗಳಿಂದಲೂ ಕ್ವಚಿತವಾಗಿ ಗುರುತಿಸುವುದು ಕಂಡು ಬರುತ್ತಿದ್ದರೂ, ಅದಕ್ಕೆ ಪ್ರಾದೇಶಿಕ ಭಿನ್ನತೆಯೇ ಕಾರಣವಾಗಿದೆ. ಸಾಮಾನ್ಯವಾಗಿ ಮತ್ತು ಅಧಿಕೃತವಾಗಿ 'ರ್‍ಯಾಣ' ಎಂದು ಕರೆಯುವುದು ಕಂಡು ಬರುತ್ತದೆ.

'ರ್‍ಯಾಣ' ಎಂದರೇನು ? ಎಂದು ಶಬ್ದದ ಬೆನ್ನು ಹತ್ತಿ ಅದನ್ನು ಅರ್ಥೈಯಿಸುವ ಪ್ರಯತ್ನ ನಡೆದಿದೆ—

> "....ಬೇಸರವನ್ನು ಕಳೆಯಲೆಂದು ಡೊಳ್ಳು ಹಾಡುಗಾರರು ಎರಡು ದೊಡ್ಡ ದೊಡ್ಡ ಹಾಡುಗಳ ಮಧ್ಯದಲ್ಲಿ ಒಂದೊಂದು ರಸಭರಿತವಾದ ಹಾಸ್ಯಾಸ್ಪದವಾದ ಚಿಕ್ಕ ಹಾಡೊಂದನ್ನು ಹೇಳುವದು ರೂಢಿಯಲ್ಲಿದೆ. ಇಂತಹ ಹಾಡಿಗೆ 'ರ್‍ಯಾಣ' ಎಂದು ಕರೆಯಲಾಗಿದೆ. ಇದಲ್ಲದೆ 'ರ್‍ಯಾಣಕ್ಕೆ' ಶಕ್ತಿ ಪ್ರದರ್ಶನ ಎನ್ನುವ ಇನ್ನೊಂದು ಅರ್ಥವು ಇದೆ.... ರ್‍ಯಾಣ ಎನ್ನುವ ಶಬ್ದ ರಾವಣ ಶಬ್ದದ ಅಪಭ್ರಂಶ ಪ್ರಯೋಗ. ರಾಮಾಯಣದ ರಾವಣನಲ್ಲಿ ಎದ್ದು ಕಾಣುವ ಗುಣಗಳು ಮುಖ್ಯವಾಗಿ ಎರಡು. ೧. ದೈಹಿಕ ಶಕ್ತಿ ೨. ಕಂಠ ಮಾಧುರ್ಯ...."[4]

ಹೀಗೆ ಡಾ|| ಸುಂಕಾಪುರ ಇವರು ರಾವಣನ ಎರಡು ಗುಣಗಳನ್ನು ಮುಂದು ಮಾಡಿ ಆ ಗುಣಗಳ ನೆನಪಾಗಿ ಜನಪದರಲ್ಲಿ ಉಳಿದ, ಜನಪದ ಕಲೆಗಳನ್ನು ನೆನಪಿಸಿ ಕೊಡುತ್ತಾರೆ. ದೈಹಿಕ ಶಕ್ತಿಗೆ ಸಂಬಂಧಿಸಿದಂತೆ 'ರ್‍ಯಾಣ ಜಗ್ಗುವದು' ಎಂಬ ಕಲೆಯ ವಿವರವನ್ನು ನೀಡಿದ್ದಾರೆ.[5] ಇದು ಶ್ರಾವಣ ಮಾಸದಲ್ಲಿ ನಡೆಯುವ 'ಮಿಂಡರ ಜೋಕಾಲಿ'ಗೆ ಹೋಲುತ್ತದೆ. ಎರಡನೆಯದಾಗಿ ಕಂಠ ಮಾಧುರ್ಯದ ಕುರಿತು ಹೇಳುತ್ತ: ರಾವಣನು ಭಕ್ತಿಯಿಂದ ಶಿವನನ್ನು ಒಲಿಸಿಕೊಂಡದ್ದು ಪುರಾಣ ಪ್ರಸಿದ್ಧ ವಿಷಯ. ರಾವಣನ ದಶಕಂಠಗಳಿಂದ ಹೊರಹೊಮ್ಮುವ ನಾದ ಸುಮಧುರ ವಾಗಿತ್ತು. ಕಿವಿಗೆ ಹಿತಕರವಾಗಿತ್ತು. ಆದ್ದರಿಂದ ರ್‍ಯಾಣ ಹೇಳುವುದು ಎಂದರೆ ಸುಮಧುರವಾಗಿ ಹಾಡುವುದು ಎಂದು ಅರ್ಥ.... ಎಂದು ರಾವಣನಿಗೆ ಸಂಬಂಧ ಹಾಕಿ 'ರಾವಣ' ಶಬ್ದ ಅಪಭ್ರಂಶದಿಂದ 'ರ್‍ಯಾಣ'ವಾಗಿದೆ ಎಂದು ಸಮರ್ಥಿಸಿ ಕೊಳ್ಳುವುದು ಕಂಡು ಬರುತ್ತದೆ.

---

4 ಬಸವಗೌಡ ಪಾಟೀಲ : ಹೀಂಗ ಬಿಟ್ರ ದೇಶಾ ಆಳ್ಯಾಳ—ಮುನ್ನುಡಿ ೧ ಮತ್ತು ೨
5 ಬಸವಗೌಡ ಪಾಟೀಲ : ಹೀಂಗ ಬಿಟ್ರ ದೇಶಾ ಆಳ್ಯಾಳ—ಮುನ್ನುಡಿ ೩

'ರ್‍ಯಾಣ' ಎಂಬ ಶಬ್ದ ಪುರಾಣದ ಇನ್ನೊಂದು ಹೆಸರಿಗೂ ತೀರ ಹತ್ತಿರವಾಗು ವಂತಹದು ಇದೆ. ಅದು 'ರ್‍ಯಾಣಿಗ' ಎಂಬ ಹೆಸರು. ರ್‍ಯಾಣಿಗನ ಲಕ್ಷಣಗಳಿಗೂ ಮತ್ತು ರ್‍ಯಾಣಗಳ ಕೆಲ ಲಕ್ಷಣಕ್ಕೂ ತೀರ ಸಾಮ್ಯತೆಯೂ ಇದೆ.

ರ್‍ಯಾಣಿಗ ಜನಪದರ ಪ್ರಕಾರ; ಈತ ಮಾರಿಮ್ಮನ (ಮಾರೆಮ್ಮ) ಸೋದರ ಮಾವ. ಸುಳ್ಳುಹೇಳಿ ಮಾರೆಮ್ಮಳನ್ನು ಮದುವೆಯಾದ ಮಾದಿಗರ ವ್ಯಕ್ತಿ, ವೈದಿಕರ ಮಾರಮ್ಮ ನಿಜ ಅರಿತ ಮೇಲೆ ಅವನನ್ನು ಕೊಲ್ಲಲು ಬೆನ್ನಟ್ಟಿದಾಗ ಆತ ಕೋಣದ ಹೊಟ್ಟೆಯಲ್ಲಿ ಹೋಗುತ್ತಾನೆ.[6] ಆಗ ಮಾರಮ್ಮ ಸಿಟ್ಟಿನ ಭರದಲ್ಲಿ ಆ ಕೋಣ ವನ್ನು ಕಡಿಯುತ್ತಾಳೆ. ಈ ಕೋಣ ಕಡೆದ ರಕ್ತದಲ್ಲಿ ಹುಟ್ಟಿದವನೇ 'ರ್‍ಯಾಣಿಗ'.

ಮಾರಮ್ಮಳ ಜಾತ್ರೆಯಲ್ಲಿ ಕೋಣ ಕಡಿದಾದ ಮೇಲೆ ಈ ರ್‍ಯಾಣಿಗ ಮನ ಬಂದಂತೆ ಅಶ್ಲೀಲ ಶಬ್ದಗಳನ್ನು ಉಪಯೋಗಿಸಿ ಮಾರಮ್ಮಳಿಗೆ ಬೈಯುತ್ತಾನೆ. ಎಷ್ಟೇ ಅಶ್ಲೀಲ ಪದಗಳನ್ನು ಬಳಸುವುದಕ್ಕೆ ಈತನಿಗೆ ಪರವಾನಿಗೆ ಇದೆ. ಬೈಯುವಾಗ ಈತ ಬಳಸುವ 'ಲಯ' ಮತ್ತು ರ್‍ಯಾಣ ಹೇಳುವಾಗ ಬಳಸುವ 'ಲಯ' ಎರಡರಲ್ಲಿ ಸಾಮ್ಯತೆ ಇದೆ. ಮತ್ತು ರ್‍ಯಾಣಗಳಲ್ಲಿ ಅಶ್ಲೀಲತೆಗೇನೂ ಕೊರತೆ ಇಲ್ಲ. ರ್‍ಯಾಣ ಹೇಳುವಾಗ ಮಧ್ಯದ ಉಸಿರಿನಲ್ಲಿ ಡೊಳ್ಳುಗಳ ಕೈ ಪೆಟ್ಟು ಬಿದ್ದರೆ, ರ್‍ಯಾಣಿಗನ ಉಸಿರಿನ ಮಧ್ಯದಲ್ಲಿ ಹಲಗೆಯ ಪೆಟ್ಟುಗಳು ಬೀಳುತ್ತವೆ. ಹೀಗೆ ಎರಡರ ಸಾಮ್ಯತೆಯೂ ಇರುವುದರಿಂದ ಒಂದರಿಂದ ಇನ್ನೊಂದಕ್ಕೆ ಅನ್ವಯಿಸಿ ಬಂದಿರಬೇಕೇನೊ ಎಂಬ ಅನುಮಾನ ಸುಳಿದರೂ ಹೀಗೆಯೇ ಬಂದಿದೆ ಎಂದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ಸಂದೇಹವೂ ಎದುರಾಗುತ್ತದೆ. ಬಳ್ಳಾರಿ ಜಿಲ್ಲೆಯ ಡೊಳ್ಳಿನ ಹಾಡುಗಳನ್ನು ಸಂಗ್ರಹಿಸಿ ಕೆ. ವಿರುಪಾಕ್ಷಗೌಡ (ಮತ್ತು ಇತರರು) ಅವರ 'ನಡಿಯಪ್ಪ ನಮ್ಮ ನಾಡಿಗೆ' ಎಂಬ ಸಂಗ್ರಹದಲ್ಲಿ ಎರಡು ರ್‍ಯಾಣ ಗಳ ಸಂಗ್ರಹವನ್ನು ಕೊಡಲಾಗಿದೆ. ಈ ರ್‍ಯಾಣಗಳಿಗೆ ಕೃತಿಯಲ್ಲಿ 'ಆರೋಹಣದ ಹಾಡು' ಎಂದು ಗುರುತಿಸಲಾಗಿದೆ. ಅಲ್ಲದೆ ಕೆಲವೆಡೆಯಲ್ಲಿ ಈ ರ್‍ಯಾಣಗಳಿಗೆ 'ರೋಣ' ಎಂದು ಬಳಸಿರುವುದು ಕಂಡುಬರುತ್ತದೆ.[7] ಹೀಗಿರುವುದರಿಂದ ಆರೋಹಣ' ಎಂದು ಕರೆಯುವ ಈ ಹಾಡುಗಳ ಹೆಸರೇ ಅಪಭ್ರಂಶವಾಗಿ ರೋಣ– ರ್‍ಯಾಣ ಆಗಿರಬಹುದೇನೊ ಎನಿಸುತ್ತದೆ.

## ರ್‍ಯಾಣ : ಮೇಳದ ಸ್ವರೂಪ

ಡೊಳ್ಳಿನ ಹಾಡುಗಳಲ್ಲಿ ಇರಬೇಕಾದ ಲಯ ವಿನ್ಯಾಸ, ಗತ್ತುಗಾರಿಕೆ, ತಾಳ ಇಂಥವೆಲ್ಲಾ ಹಾಡಿನಿಂದ ಹಾಡಿಗೆ ಸಿಗುವ ವೈವಿಧ್ಯತೆ ಕಡಿಮೆ ಎಂದೇ ಹೇಳ

---

6 ಹೆಚ್ಚಿನ ವಿವರಕ್ಕಾಗಿ ನೋಡಿ: ಅರವಿಂದ ಮಾಲಗತ್ತಿ: ಶಿರಸಿಯ ಮಾರಿಕಾಂಬಾ ಮತ್ತು ಕೋಣ—೩೬, ವಿಮರ್ಶೆ ಪತ್ರಿಕೆ, ಸಂ.—೧, ಸಂ.—೩

7 ಸಂ : ಕೆ. ವಿರುಪಾಕ್ಷಗೌಡ ಇತರರು : ನಡಿಯಪ್ಪ ನಮ್ಮ ನಾಡಿಗೆ—೪೩ ಮತ್ತು ೫೫ ೪

ಬಹುದು. ಇದೂ ಅಲ್ಲದೆ ದೇವರ ಮಹಿಮೆಯ ಕುರಿತ ಹಾಡುಗಳು ತುಂಬಾ ದೀರ್ಘವಾಗಿರುತ್ತವೆ. ಈ ಗುಣಗಳಿಂದಾಗಿ ಕೇಳುಗರ ಮನಸ್ಸನ್ನು ಬಹಳ ಹೊತ್ತು ಕೇಂದ್ರೀಕರಿಸುವದಾಗಲಿ ಇಲ್ಲವೆ ಅವರಿಗೆ ಬಹಳ ಹೊತ್ತು ರಂಜಿಸುವುದರಲ್ಲಿ ಸೋಲುತ್ತವೆ. ಹಾಡು, ಲಯ-ಗತ್ತುಗಳಲ್ಲಿ ಮತ್ತು ವಸ್ತುವಿನಲ್ಲಿ ವೈವಿಧ್ಯವಿದ್ದಾಗಲೂ ರಾತ್ರಿ ಇಡೀ ನಡೆಯುವಂತಹ ಕಾರ್ಯಕ್ರಮಗಳಲ್ಲಿ ಕೇಳುಗರನ್ನು ಹಿಡಿದಿಡುವುದು ಕಷ್ಟವಾಗುತ್ತದೆ. ಈ ಹಿಡಿದಿಡುವಿಕೆಯ ಕ್ರಿಯೆಗೆ ಅನುವಾಗಲೆಂದು ಮತ್ತು ಮಧ್ಯದಲ್ಲಿ ರಂಜಕತೆ ಬೇಕು ಎಂಬ ಉದ್ದೇಶದಿಂದ ಈ ರ್‍ವಾಣಗಳನ್ನು ಡೊಳ್ಳು ಹಾಡಿನ ಮಧ್ಯದಲ್ಲಿ ಹೇಳಲಾಗುತ್ತದೆ. ಈ ಹಾಡುಗಾರಿಕೆಯ ತಂಡಗಳಲ್ಲಿ ಇಂತಹ ಸಂದರ್ಭದಲ್ಲಿ ಸ್ಪರ್ಧಾ ಮನೋಭಾವನೆ ಸಹಜ. ಈ ಮಧ್ಯದಲ್ಲಿ ಬೇಸರ ಕಳೆಯಲು ಬರುವ ಈ ರ್‍ವಾಣಗಳು, ಮಹಿಮೆಯ ಹಾಡುಗಳು ಜನತೆಯ ತಾಳ್ಮೆಯನ್ನು ಕೆದಕುವ ಲಕ್ಷಣಗಳು ಕಂಡಾಕ್ಷಣ ಹಾಡುಗಾರರು ಈ ರ್‍ವಾಣದ, ಧಾಟಿಯನ್ನು ಮುಂದು ಮಾಡುತ್ತಾರೆ. ಇಲ್ಲದೆ ಹೋದಲ್ಲಿ ನೇರ ಜನಗಳೇ ರ್‍ವಾಣಗಳನ್ನು ಹೇಳಲು ಕೇಳುವದಿದೆ.

ಡೊಳ್ಳಿನ ಮೇಳದವರೆ ರ್‍ವಾಣಗಳನ್ನು ಹೇಳುತ್ತಾರೆ. ಆದರೆ ಡೊಳ್ಳಿನ ಹಾಡು ಹೇಳುವವರೆಲ್ಲಾ ರ್‍ವಾಣಗಳನ್ನು ಹೇಳುತ್ತಾರೆಂದಲ್ಲ. ರ್‍ವಾಣ ಹೇಳುವ ಪ್ರಾವಿಣ್ಯತೆ ಎಲ್ಲರಿಗೂ ಇರುವುದಿಲ್ಲ. ಇದ್ದರೂ ಕೂಡಾ ಅದು ಅವರವರ ಸಾಮರ್ಥ್ಯಕ್ಕೆ ಸಂಬಂಧಿಸಿರುತ್ತದೆ. ಕಥೆ ಹೇಳುವ ರೀತಿ, ಸರಾಗವಾದ ಲಯದ ಓಟ, ಪ್ರಾಸಾನುಪ್ರಾಸ ಇಂಥವೆಲ್ಲಾ ಅವನ ಪ್ರಾವಿಣ್ಯತೆಯನ್ನು ಎತ್ತಿ ತೋರಿಸುತ್ತದೆ. ಒಂದೇ ಕಥೆಯನ್ನು ಒಬ್ಬ ಹೇಳುಗನ ರ್‍ವಾಣಿಗನ ಬಾಯಿಯ ಕಥೆಗಿಂತ, ಇನ್ನೊಬ್ಬನ ಬಾಯಿಂದ ಹೊರಡುವಾಗ ಆಶಯ ಒಂದೇ ಇದ್ದರೂ ಕಥೆ ಒಂದೇ ಇದ್ದರೂ 'ಬಂಧ' ಬೇರೆ ಬೇರೆಯಾಗುವುದು ಕಂಡುಬರುತ್ತದೆ.

ರ್‍ವಾಣಗಳನ್ನು ಹೇಳುವಾಗ ಎರಡು ರೀತಿಯ ಮೇಳಗಳು ಕಂಡುಬರುತ್ತವೆ. ಇದಕ್ಕೆ ಮುಖ್ಯ ಕಾರಣ ರ್‍ವಾಣಗಳಲ್ಲಿ ಇರುವ ಭಿನ್ನತೆ. ರ್‍ವಾಣಗಳಲ್ಲಿ ಕೆಲವು ಗದ್ಯಲಯದಲ್ಲಿಯೇ ಹೇಳಿಕೊಂಡು ಹೋಗುವಂಥವು. ಇನ್ನು ಕೆಲವು ಗದ್ಯ ಮತ್ತು ಪದ್ಯ (ಗಪದ್ಯ)ದ ಮಿಶ್ರಣಗಳಿಂದ ಒಳಗೊಂಡಿರುವಂಥವು ಇವೆ. ಗದ್ಯ ಲಯದ ರ್‍ವಾಣಗಳನ್ನು ಹೇಳುವಾಗ ಇಬ್ಬರಿಂದ ಕೂಡಿದ ತಂಡವಿದ್ದರೆ ಗಪದ್ಯದ ರ್‍ವಾಣಗಳನ್ನು ಹೇಳುವಾಗ ನಾಲ್ಕು ಜನರಿಂದ ಕೂಡಿದ ಮೇಳವಿರುವುದು ಕಂಡುಬರುತ್ತದೆ.

ಇಬ್ಬರಿಂದ ಕೂಡಿದ ರ್‍ವಾಣದ ತಂಡದಲ್ಲಿ, ಒಬ್ಬ ರ್‍ವಾಣ ಹೇಳುಗ (ರ್‍ವಾಣಗಾರ) ಇನ್ನೊಬ್ಬ ಹೇಳುತ್ತಿರುವ ರ್‍ವಾಣಕ್ಕೆ ಸ್ಪೂರ್ತಿ ಕೊಡುವುದಕ್ಕೆ 'ಹಾಂ', 'ಹುಂ' ಗುಟ್ಟುತ್ತ ಹೋಗುವವ. ರ್‍ವಾಣ ಹೇಳುಗನೇ ಡೊಳ್ಳನ್ನು ಹೊಂದಿದ್ದು, ರ್‍ವಾಣವನ್ನು ಹೇಳುತ್ತ ಡೊಳ್ಳಿಗೆ ಕೈ ಪೆಟ್ಟು ಹಾಕುತ್ತಿರುತ್ತಾನೆ. ರ್‍ವಾಣಕ್ಕೆ 'ಹುಂ'ಗುಟ್ಟುವಾತ ತಾಳವನ್ನು ಹೊಂದಿದ್ದು ಉಸಿರು ನಿಂತಾಗ ಡೊಳ್ಳಿನ ಕೈ ಪೆಟ್ಟಿನೊಂದಿಗೆ ತಾಳ ಹಾಕುತ್ತಾನೆ.

'ಹುಂ'ಗುಟ್ಟ ಸಹಧ್ವನಿಯು ವ್ಯಕ್ತಿ ಯಾವಾಗಲೂ ಕೇವಲ 'ಹುಂ'ಗುಟ್ಟುತ್ತ ಹೋಗುತ್ತಾನೆಂಬಲ್ಲ. ಬೇರೊಂದು ಶಬ್ದ ಹೇಳಿ ಸ್ಫುಟಕೊಡಲೂ ಬಹುದು. ಇಲ್ಲದೆ ಈ ಶಬ್ದಗಳು ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆದುಕೊಳ್ಳುವುದು ಕಂಡುಬರುತ್ತದೆ. ಅಂದರೆ ಇದರಲ್ಲಿ ವೈವಿಧ್ಯತೆ ಇದೆ.

ಉದಾ : ೧. ಹುಲ್ಲುಲ್ಲುಗ್ಯೊ....ಹುಲ್ಲುಲ್ಲುಗ್ಯೊ
೨. ಅಣ್ಣಣ್ಣ....ಅಣ್ಣಣ್ಣ
೩. ಹೌದಣ್ಣಾ ಹೌದೋ....
೪. ಹೌದಪ್ಪ ಹೌದೋ....
೫. ಹೌದಲೇ ತಮ್ಮ
೬. ಕಡೆ....ಕಡೆ....

ಎಂದು ಮುಂತಾಗಿ ಹೇಳುವುದು ಕಂಡು ಬರುತ್ತದೆ. ಕೆಲವು ಬಾರಿ ಈ ಸಹಧ್ವನಿಯುವ ರ್‍ವಾಣಗಾರನ ಹಾಸ್ಯದ ಮಾತಿಗೆ ತನ್ನದೊಂದು ಹಾಸ್ಯದ ಚಟಾಕಿಯನ್ನು ಹೇಳುವ ಬಗೆಯೂ ಕಂಡುಬರುತ್ತದೆ. ರ್‍ವಾಣ ಹೇಳುವುದು ನಿಲ್ಲಿಸುವ ಉಸಿನ ಸಂದರ್ಭದಲ್ಲಿ ಈ ಇಬ್ಬರೂ ಪರಸ್ಪರ ತಮ್ಮ ನಿಂತ ಸ್ಥಳಗಳನ್ನು ಬದಲಾಯಿಸುತ್ತಾರೆ. ಅಂದರೆ ಎಡದಿಂದ ಬಲಕ್ಕೆ-ಬಲದಿಂದ ಎಡಕ್ಕೆ ಸುಯ್ಯದಾಡುತ್ತಿರುತ್ತಾರೆ. ಈ ಸಂದರ್ಭದಲ್ಲಿ ಇವರಿಬ್ಬರ 'ಯುಮುಕ' ಒಬ್ಬನಿನ್ನೊಬ್ಬನಿಗಿಂತ ಎತ್ತರ ಪುಟ್ಟದಾಗಿದ್ದು ಹಾಸ್ಯಕ್ಕೆ ಮತ್ತಷ್ಟು ಕಚಗುಳಿ ಇಟ್ಟಂತೆ ಆಗುತ್ತದೆ.

ನಾಲ್ಕು ಜನರಿಂದ ಕೂಡಿದ ಮೇಳದಲ್ಲಿ ಮೇಲಿನಂತೆಯೇ ಒಬ್ಬ ಹೇಳುಗ ಇನ್ನೊಬ್ಬ ಸಹಧ್ವನಿಕನಿದ್ದು ಮೇಲಿನಂತೆಯೇ ಸಾಗುತ್ತದೆ. ಆದರೆ ಪದ್ಯ ಭಾಗ ಬಂದಾಗ ಹೇಳುಗ ಮತ್ತು ಸಹಧ್ವನಿಕ ಇಬ್ಬರೂ ಸೇರಿ ಹಾಡನ್ನು ಹೇಳಿದರೆ ಇನ್ನಿಬ್ಬರು ನಂತರದಲ್ಲಿ ಆ ಸಾಲುಗಳನ್ನು ಪುನರಾವರ್ತನೆ ಮಾಡುತ್ತಾರೆ. ಇನ್ನುಳಿದ ಸಮಯದಲ್ಲಿ ಸಹಜವಾಗಿ ಮೌನ ಹಿಡಿದು ನಿಂತಿರುವುದು ಕಂಡುಬರುತ್ತದೆ. ಕೆಲವೆಡೆಗೆ ನಾಲ್ಕು ಜನರ ಈ ಮೇಳದಲ್ಲಿ ಕೇಳುಗ-ಸಹದನಿಕರೆ ವಾದ್ಯಗಳನ್ನು ನುಡಿಸಬೇಕು ಎಂಬ ನಿಯಮವೇನಿಲ್ಲ. ಹಾಡಿನ ಸಾಲುಗಳನ್ನು ಹೇಳುವ ಹಿಮ್ಮೇಳದವರೇ ಎರಡು ಡೊಳ್ಳುಗಳನ್ನು ನುಡಿಸುವುದು ಕಂಡುಬರುತ್ತದೆ. ಹೇಳುಗ ಮತ್ತು ಸಹಧ್ವನಿಕ ತಾಳ ಹಾಕುವುದು ವಾಡಿಕೆ. ಹೀಗೆ ಎರಡು ರೀತಿಯಲ್ಲಿ ಕಂಡುಬರುವ ಈ ಮೇಳಗಳಿಗೆ ಪ್ರತ್ಯೇಕವಾಗಿ 'ರ್‍ವಾಣ ಮೇಳ' ಎಂದು ನೇರ ಕರೆಯುವುದು ಕಡಿಮೆ. ಆದರೆ ಇವರಿಗೂ 'ಡೊಳ್ಳಿನ ಮಜಲಿನವರು' ಎಂದೇ ಗುರುತಿಸುತ್ತಾರೆ. ಏಕೆಂದರೆ ಪ್ರಧಾನ ಹಾಡಿನ ಲಕ್ಷಣವೇ ಅದರ ಶೀರ್ಷಿಕೆಯಾಗಿ ಬರುವುದು ಜನಪದರಲ್ಲಿ ಸರ್ವೇಸಾಮಾನ್ಯವಾದುದಾಗಿದೆ. ಇದಲ್ಲದೆ ಈ ರ್‍ವಾಣಗಳನ್ನು ಗೊರಪ್ಪ (ಗ್ವರಪ್ಪ) ಅಥವಾ ನಗಯ್ಯಗಳೂ ಹೇಳುತ್ತಾರೆ ಎಂದು ಹೇಳುವದಿದೆ.

## ರ್‍ಯಾಣಗಳ ಸ್ವರೂಪ ಮತ್ತು ಲಕ್ಷಣಗಳು

ರ್‍ಯಾಣಗಳ ಕುರಿತು ಹೆಚ್ಚಿನ ಸಂಗ್ರಹಗಳು ಬಂದಿಲ್ಲ. ಅಷ್ಟೇ ಅಲ್ಲ ಸಂಗ್ರಹದ ಕೆಲಸವೂ ಆಗಿಲ್ಲ. ಹೀಗಿರುವಾಗ ಅದರ ಲಕ್ಷಣ ಕುರಿತು ಹೇಳುವುದು ಕಷ್ಟದ ಕೆಲಸ. ಹೀಗಾಗಿ ನನಗೆ ಲಭ್ಯವಾಗಿರುವ ರ್‍ಯಾಣಗಳ ಮಿತಿಯಲ್ಲಿಯೆ[8] ಗುರುತಿಸಲು ಪ್ರಯತ್ನಿಸಿರುವೆ.

ರ್‍ಯಾಣಗಳು ಶೃಂಗಾರ ಪ್ರಧಾನವಾದವು. ಈ ಕಾರಣದಿಂದಾಗಿಯೇ ಜನಪದ ಸಂಗ್ರಹಕಾರರು ಡೊಳ್ಳಿನ ಮಜಲಿನವರಿಂದ ಡೊಳ್ಳಿನ ಹಾಡುಗಳನ್ನು ಸಂಗ್ರಹಿಸಿ ಹೊರತಂದು, ರ್‍ಯಾಣಗಳನ್ನು ಕಡೆಗಣಿಸಿರುವುದು ಕಂಡು ಬರುತ್ತದೆ. ಶೃಂಗಾರ ರಸ ಇಲ್ಲಿ ಎಷ್ಟರಮಟ್ಟಿಗೆ ಸೇರಿಕೊಂಡಿರುತ್ತದೆ ಎಂಬುದನ್ನು ಅವರದೇ ಆದ ಗಾದೆ ಮಾತಿನಿಂದ ಹೇಳುವುದಾದರೆ—

'ರ್‍ಯಾಣ ಹೇಳಿದರ ಕ್ಯಾಣ ಹಾರತಾವ'—ಎಂಬುದೊಂದು ಗಾದೆ. ಇಂಥ ಗಾದೆಗೆ ತಕ್ಕಂತೆಯೇ ರ್‍ಯಾಣಗಳಿವೆ. ಸಂಗ್ರಹಕಾರರಿಗೆ ಹೇಳುವಾಗ ಇಂತಹ ಸಂದರ್ಭ ಸನ್ನಿವೇಶಗಳನ್ನು ಸ್ವಲ್ಪ ಸುಧಾರಿಸಿ ಹೇಳುವ ಪ್ರಯತ್ನಗಳು ಕಂಡು ಬಂದರೂ ಜನಪದರು ತಮ್ಮದೇ ಆದ ವೇದಿಕೆಯಲ್ಲಿ ಮಾತ್ರ ಯಾವುದೇ ಬಗೆಯ ಹಂಗಿಲ್ಲದೆ ಹರಿದುಬರುತ್ತವೆ. ಇಂತಹದಕ್ಕೆ ಉದಾಹರಣೆಯಾಗಿ, ಬೆಣ್ಣೆ ಮಾರಲು ಜಮುಖಂಡಿ ಜಾತ್ರೆಗೆ ಹೋದವಳ ಕಥೆಯನ್ನು ಗಮನಿಸಬಹುದು.

ಶೃಂಗಾರದ ಗುಣದ ಜೊತೆಗೆ ಹಾಸ್ಯವೂ ಬೆರೆತುಕೊಂಡಿರುತ್ತದೆ. ಈ ಹಾಸ್ಯ ಟೊಂಕದ ಕೆಳಗಿನ ಭಾಷೆಯನ್ನು ಹೆಚ್ಚಿಗೆ ಅವಲಂಬಿಸಿರುತ್ತದೆ. ಅಶ್ಲೀಲ ಎಂದು ಗುರುತಿಸುವ ಶಬ್ದಗಳು ಒಂದರಿಂದ ಇನ್ನೊಂದಕ್ಕೆ ಬೆಸೆಯುತ್ತ ಬಾಯಿ ಬಿಚ್ಚಿದ ಕೊಂಡಿಯಂತೆ ಉದುರುತ್ತ ಹೋಗುತ್ತದೆ. ಈ ಸೂತ್ರಬದ್ಧತೆ ಹಾಸ್ಯಕ್ಕೆ ಮತ್ತಷ್ಟು ರಂಗೇರಿಸುವಂತಹದಾಗಿರುತ್ತದೆ. ದಿನ ನಿತ್ಯದಲ್ಲಿ ಬಳಸಲಾದ ಶಬ್ದಗಳೆಲ್ಲಾ ಇಲ್ಲಿ ಬಳಕೆಯಾಗುತ್ತವೆ.

"..........................
ಎಲಾ ಡೊಳ್ಳಿನಂಥಾ ಹೊಟ್ಟೆಯವಳ

---

8 (ಅ) ಸಿದ್ಧಣ್ಣ ಜಕಬಾಳ ಅವರು ಸಂಗ್ರಹಿಸಿ ಒದಗಿಸಿಕೊಟ್ಟ ಐದು ರ್‍ಯಾಣಗಳು (ಸವಪತ್ತಿಯ ಮಪ್ಲೂರಲ್ಲೇ ಸಂಗ್ರಹಿಸಿದ್ದು, ಬೆಳಗಾಂವ ಜಿಲ್ಲೆ)
(ಆ) ಅರವಿಂದ ಮಾಲಗತ್ತಿ ಇವರು ಸಂಗ್ರಹಿಸಿದ ಹನ್ನೊಂದು ರ್‍ಯಾಣಗಳು (ಧಾರವಾಡ ಜಿಲ್ಲೆಯ ಕ್ಯಾರಕೊಪ್ಪ, ಮೊರಬ ಗ್ರಾಮಗಳಲ್ಲಿ ಸಂಗ್ರಹಿಸಿದ್ದು)
(ಇ) ಬಸವಗೌಡ ಅವರು ಸಂಗ್ರಹಿಸಿದ ಹದಿನೈದು ರ್‍ಯಾಣಗಳು (ಧಾರವಾಡ ಜಿಲ್ಲೆಯ ಶಿರಹಟ್ಟಿ ಗ್ರಾಮದಲ್ಲಿ ಸಂಗ್ರಹಿಸಿದ್ದು)
(ಈ) ಕೆ. ವಿರುಪಾಕ್ಷಗೌಡ ಇತರರು ಸಂಗ್ರಹಿಸಿದ ಎರಡು ರ್‍ಯಾಣಗಳು (ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ ರ್‍ಯಾಣಗಳು)

ಕುಂಬಳ ಕಾಯಿಯಂಥಾ ಕುಂಡಿಯವಳ
ಹಂಚಿ ಪುಟ್ಟಿಯಂಥಾ ತಲೆಯವಳ
ಮಾವಿನ ಹಣ್ಣಿನಂಥ ಮಲೆಯವಳ
ಬಾಳಿಕಂಬದಂಥಾ ತೊಡೆಯವಳ
ಜರತ ಗುಂಡಿಯಂಥಾ ಹಲ್ಲಿನವಳ
ಮೂರ ವರ್ಷದ ಮಸರ ಬಾಯಿಯಂಥಾ ಪಿಸರ ಬಾಯಿಯವಳ
ನೆಟ್ಟಗ ಜಮಖಂಡಿ ಜಾತ್ರಿಗಿ ಹೊಕ್ಕೈತಿ ಹೋಗ
ನಿನ್ನ ಅಕ್ಕನ ಹಡ್ಲೆಂದನ್ನೀ ಯಣ್ಣಾ"

ಯಾವುದೇ ಒಂದು ವಸ್ತುವನ್ನು ಕುರಿತು ಹೇಳಬೇಕಾಗಿದ್ದರೂ ಅದು ವರ್ಣ ನಾತ್ಮಕವಾಗಿ ಹೇಳುತ್ತ ಹೋಗುವುದು ಇನ್ನೊಂದು ಬಗೆ. ಈ ಲಕ್ಷಣವನ್ನು ಮೇಲೆ ನೀಡಿದ ಉದಾಹರಣೆಯಲ್ಲಿಯೇ ಗಮನಿಸಬಹುದಾಗಿದೆ. ಇದಲ್ಲದೆ ಯಾವುದೇ ಒಂದು ಊರ ಬಗ್ಗೆ ಹೇಳಬೇಕಾದರೆ ಹತ್ತಾರು ಊರುಗಳ ಹೆಸರುಗಳನ್ನು ಸರಾಗ ವಾಗಿ ಮುತ್ತಿನಂತೆ ಪೋಣಿಸುತ್ತ ಹೋಗುವುದು ಕಂಡುಬರುತ್ತದೆ. ಈ ಪೋಣಿಸುವ ಕ್ರಿಯೆಯಲ್ಲಿ ಲಯ ಒಂದೇ ಗತ್ತಿನಲ್ಲಿ, ದೀರ್ಘವಾದ ಉಸಿರಿನಲ್ಲಿ ಓಡುತ್ತಿರುತ್ತದೆ. ಉಸಿರು ದೀರ್ಘವಾದಲ್ಲಿ ಓಡಿದಂತೆ ಕೇಳುಗರ ಮನಸ್ಸು ಉದ್ವಿಗ್ನ ಸ್ಥಿತಿಗೆ ಏರುತ್ತ ಹೋಗುತ್ತದೆ. ಶಬ್ದಗಳ ಜಾಲ, ಧ್ವನಿಯ ಏರಿಳಿತದ ಮೋಡಿಗಳಿಂದ ವಿಶೇಷವಾಗಿ ಆಕರ್ಷಿಸುತ್ತವೆ.

ರ್ವಾಣದಲ್ಲಿ ಪ್ರಾಸ ಇನ್ನೊಂದು ಲಕ್ಷಣವಾಗಿಯೇ ಸೇರಿಕೊಳ್ಳುತ್ತದೆ. ಆದಿ, ಅಂತ್ಯ, ಅನುಪ್ರಾಸಗಳು ಸಾಮಾನ್ಯವಾದರೂ ಅಂತ್ಯಪ್ರಾಸ ಹೆಚ್ಚು ವಾಡಿಕೆ ಯಲ್ಲಿರುವುದು ತಿಳಿದುಬರುತ್ತದೆ.

"......................
ಏ ಜಾಲಗಾರ ಜಕ್ಕ
ಖೊಖ್ ಖೊಖ್ ನಕ್ಕ
ಸೂಳಿ ಮನಿ ಹೊಕ್ಕ
ಬೇಡ್ಯಾಳು ಚೊಕ್ಕ
ಆರ ಟಂಕಿ ರೊಕ್ಕ
ಇನ್ನ ಕಡೆ ಇದ್ವಪ್ಪಾ ಮೂರ ಟಂಕಿ ರೊಕ್ಕ"

ಹೀಗೆ ಪ್ರಾಸಗಳ ಜೊತೆಗೆ ಲಯದ ಏರಿಳಿತದಿಂದ ಗತ್ತುಗಾರಿಕೆಯನ್ನು ಹೆಚ್ಚಿಸಿ ಕೊಳ್ಳುವುದು ಕಂಡುಬರುತ್ತದೆ.

ಅಸಂಬದ್ಧವಾಗಿ ಹೇಳಿ ನಗಿಸುತ್ತ ಹೋಗುವುದು ಹಾಸ್ಯದ ಒಂದು ಲಕ್ಷಣ. ಹಾಸ್ಯ ಪ್ರಧಾನತೆಯನ್ನು ಹೊಂದಿದ ಈ ರ್ವಾಣಗಳು ಅಸಂಬದ್ಧತೆಯನ್ನು ವಿಫುಲ

ವಾಗಿ ಬಳಸಿಕೊಂಡು ಅದನ್ನು ತನ್ನದಾಗಿಸಿಕೊಂಡಿದೆ. ಇದಲ್ಲದೆ ಸಾಧ್ಯವಾಗದೆ ಇದ್ದುದನ್ನು ತತ್‌ಕ್ಷಣವೇ ಸಾಧ್ಯವಾಗಿ ತೋರಿಸುವುದು.

"ಒಂದು ಗೋದಿ ಬೀಸಿ
ಒಂಬತ್ತ ಕಡಬ ಮಾಡಿ
ಬೀಗರು ಉಂಡು
ಬಿಜ್ಜರೂ ಉಂಡು
ಹೆಚ್ಚಿದ ಕಡಬು
ಅಟ್ಟದ ಮ್ಯಾಲೆ ಇಟ್ಟರ
ಅಟ್ಟ ಕಡಕೊಂಡ ಬಿತ್ತು
ಎಂಟೆತ್ತಿನ ಸೊಂಟಾ ಮುರಿತು
ವಿಜಾಪುರದವರು ಇದೇನು ಸೋಜಿಗಂತ ಹೇಳಿ
ತಗಣಿಗಿ ಮುಗದಾಣ ಹಾಕ್ಕೊಂಡ ಬಂದ್ರಪ್ಪಾ
......................."

ಮನುಷ್ಯನ ನ್ಯೂನತೆಗಳನ್ನು ಬಳಸಿಕೊಳ್ಳುವುದು, ಹಾಸ್ಯಕ್ಕೆ ವಸ್ತುವಾಗ ಬಹುದಾದುದ್ದೆಲ್ಲವನ್ನೂ ಇವರು ಬಳಸಿಕೊಂಡಿದ್ದಾರೆ. ಆದರೆ ಈ ವಸ್ತುವನ್ನು ಬಳಸಿಕೊಳ್ಳುವುದರಿಂದ ಜನಗಳ ಮನಸ್ಸಿಗೆ ನೋವಾದೀತಲ್ಲಾ ಎಂಬ ವಿಚಾರ ಇಲ್ಲದೆ ಹೋದಾಗಲೂ ಜನಗಳು ಅದನ್ನು ಅಷ್ಟೇ ಹಗುರಾಗಿ ತೆಗೆದುಕೊಂಡು ನಕ್ಕು ಮುಂವಕ್ಕೆ ಸಾಗುವುದು ಜನಪದರ ವಿಶೇಷತೆಯೂ ಆಗಿದೆ.

ರ್‍ಯಾಣಗಳು ವಸ್ತುನಿಷ್ಠವಾದವು. ಯಾವುದೇ ಒಂದು ಸಂದರ್ಭ ಅಥವಾ ಘಟನೆಯನ್ನು ತನ್ನದಾಗಿಸಿಕೊಂಡಿರುತ್ತದೆ. ಸೌಂದರ್ಯ, ಜಾಣತನ, ದಡ್ಡತನ, ಹೆಡ್ಡತನ, ಬಜಾರಿತನ, ಹರೆಯದ ಹೆಣ್ಣು, ಹರೆಯದಗಂಡು ಇಂಥವುಗಳ ಪರವಾಧಿಕಾರದ ದುರವಸ್ಥೆ ಅಥವಾ ವಿಕೃತ ಸ್ಥಿತಿಯನ್ನು ಹೊಂದಿದವುಗಳಾಗಿ ಬಂದಿರುತ್ತವೆ.

ಚುಟುಕಾದ ರ್‍ಯಾಣಗಳೂ ಇವೆ. ಸುದೀರ್ಘವಾದ ರ್‍ಯಾಣಗಳೂ ಇವೆ. ಸಾಂದರ್ಭಿಕ, ಘಟನಾ ಪ್ರಧಾನ, ಕಥಾನಕ, ವಾಸ್ತವಿಕ, ಐತಿಹಾಸಿಕವಾದ ರ್‍ಯಾಣಗಳೂ ಇವೆ. ಐತಿಹಾಸಿಕವಾದ ರ್‍ಯಾಣಗಳು ಸಿಗುವುದು ಅಪರೂಪ. ಸಿಕ್ಕರೂ ಅಂಥವು ಹಾಸ್ಯಪ್ರಧಾನವಾಗಿರದೆ ಗಂಭೀರತೆಯನ್ನು ಉಳ್ಳವುಗಳಾಗಿರುತ್ತವೆ.[9]

ರ್‍ಯಾಣ ಮತ್ತು ಲಾವಣಿಗಳಲ್ಲಿ ರಾಚನಿಕ ಶೈಲಿಯಲ್ಲಿ ಸ್ವಲ್ಪ ಸಾಮ್ಯತೆ ಇರುವುದು ಕಂಡುಬರುತ್ತದೆ. ರ್‍ಯಾಣದ ಕೊನೆಗೆ ರ್‍ಯಾಣವನ್ನು ಕಟ್ಟಿದವನ ಹೆಸರು ಸೇರಿಕೊಂಡಿರುತ್ತದೆ. ಲಾವಣಿಯಲ್ಲಿ ಲಾವಣಿಯನ್ನು ಕಟ್ಟಿದವರ ಹೆಸರು ಸೇರಿರು

---

9 ಸಂ: ಬಸವಗೌಡ ಪಾಟೀಲ: ಹೀಂಗ ಜಿಟ್ರ ದೇಶಾ ಆಳ್ಳ್ಯಾ ೯—೩೭-೪೨, ಪಾತರ ದವಳು ಎಂಬ ರ್‍ಯಾಣವನ್ನು ಗಮನಿಸಿರಿ

ವುದು ಅಷ್ಟೇ ಸಾಮಾನ್ಯವಾದುದು. ಧ್ವನಿಯ ಏರಿಳಿತದಲ್ಲಿ ಹೋಲಿಸುವುದಲ್ಲದೆ ಲಾವಣಿಯ ಹಾಡುಗಾರಿಕೆಯಲ್ಲಿ ಹೇಗೆ ಸ್ಪರ್ಧೆ ಇರುತ್ತದೆಯೋ ಹಾಗೆ ಇಲ್ಲಿ ತಂಡ ಗಳ ಮಧ್ಯದಲ್ಲಿ ಸ್ಪರ್ಧೆಯೂ ಒಂದಂಶವಾಗಿ ಸೇರಿಕೊಂಡು ಬಂದಿರುತ್ತದೆ. ಮತ್ತು ಜನಪದದ ಪ್ರಮುಖ ಲಕ್ಷಣವಾಗಿ ನಿಲ್ಲುವ ಪುನರಾವರ್ತನೆಯು ಇಲ್ಲಿ ಒಡೆದು ಕಾಣುತ್ತದೆ.

ಎಲ್ಲಕ್ಕಿಂತಲೂ ವಿಶೇಷ ಮತ್ತು ತಕ್ಷಣವೇ ಒಡೆದು ಕಾಣುವ ಅಂಶವೆಂದರೆ ರ್‍ವಾಣಗಳ ಆರಂಭ ಮತ್ತು ಮುಕ್ತಾಯ. ಒಂದೇ ರೀತಿಯ ಧ್ವನಿ ಮತ್ತು ಒಂದೇ ಬಗೆಯ ಸಾಲಿನೊಂದಿಗೆ ಮುಕ್ತಾಯವಾಗುತ್ತದೆ.

ಹುಲ್ಲುಲಗ್ಯೆಪ್ಪೊ ಹುಲ್ಲುಲಗ್ಯೊ
ಹುಲ್ಲು ಲಗ್ಯೆಪ್ಪೊ ಹುಲ್ಲುಲಗ್ಯೊ

ಎಂಬ ಸಾಲುಗಳೊಂದಿಗೆ ಪ್ರಾರಂಭವಾಗಿ, ಇವೇ ಸಾಲುಗಳೊಂದಿಗೆ ಮುಕ್ತಾಯ ವಾಗುತ್ತದೆ. ಇದು ಅಲ್ಲದೆ ರ್‍ವಾಣಗಾರನ ಜೊತೆಗಾರ ಸ್ಫೂರ್ತಿದಾಯಕವಾಗಬಲ್ಲ, ಬೇರೆ ಬೇರೆ ಶಬ್ದಗಳನ್ನು ಬಳಸುತ್ತಾನೆ. ಇದು ಪ್ರಾದೇಶಿಕವಾಗಿಯೂ ಭಿನ್ನತೆ ಇರುವುದು ಕಂಡು ಬರುತ್ತದೆ; ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಅಂತಹ ಸಾಲುಗಳು ಆರಂಭ ಮತ್ತು ಅಂತ್ಯಕ್ಕೆ ಬಳಸುವುದು ಕಂಡುಬರುತ್ತದೆ. ಅಂತ್ಯದಲ್ಲಿ ಈ ಪ್ರಾರಂಭದ ಸಾಲುಗಳು ಹೇಳುವ ಮುನ್ನ ಇನ್ನೊಂದು ಅನುಪ ಸಾಲುಗಳು ಇರುತ್ತವೆ.

ಏ ಅಂತರಲೆ ಆಡತೈತಿ ಗಿಡಗ
ಗಿಡುಗನ ಕಾಲಾಗ ಪಾವಸೇರ ಬೆಳ್ಳಿ ಕಡಗ
ರ್‍ವಾಣ ಹೇಳಿದಪ್ಪ ಕುರುಬರ ಹುಡುಗ

ಇದು ಸಾಮಾನ್ಯವಾಗಿ ಕಂಡುಬರುವ ಅಂತ್ಯದ ನುಡಿ. 'ಕುರುಬರ ಹುಡುಗ' ಎಂಬ ಪದಗಳ ಬದಲಾಗಿ ರ್‍ವಾಣ ಕಟ್ಟಿದವರ ಅಥವಾ ಹೇಳಿದವರ ಹೆಸರು ಬಂದು ಸೇರುತ್ತದೆ. ಸಾಮಾನ್ಯವಾಗಿ ಇದು ನಮ್ಮ ಸಂಗ್ರಹದ ರ್‍ವಾಣಗಳಲ್ಲಿ ಕಂಡುಬಂದರೂ ಕೆಲ ರ್‍ವಾಣಗಳಲ್ಲಿ ಇದು ಬಂದಿಲ್ಲ. ನುರಿತ ಅಥವಾ ಪಳಗಿದ ರ್‍ವಾಣಗಾರರಾದವರು ಈ ಅಂತ್ಯ ನುಡಿ ಬಾರದೆಹೋದರೆ ಅವರ ಸ್ಥಾನವನ್ನು ಕೆಳಗಿತ್ತು ಮಾತನಾಡುವ ಧ್ವನಿ ವ್ಯಕ್ತವಾಗುತ್ತದೆ. ಅಂದರೆ 'ಪಳಗಿದವನಲ್ಲಾ' ಎಂಬ ಧ್ವನಿ ಅದು ಹೇಳಿ ಕೊಡುತ್ತದೆ. ಈ ಅಂತ್ಯನುಡಿ ಬಳ್ಳಾರಿ ಧಾರವಾಡ ಎರಡು ಜಿಲ್ಲೆಯಲ್ಲಿ ಸಂಗ್ರಹಿತ ವಾದ ರ್‍ವಾಣಗಳಲ್ಲೂ ಇದೆ.

ರ್‍ವಾಣಗಳು ಎರಡು ತಂಡಗಳ ಮಧ್ಯದಲ್ಲಿ ಸ್ಪರ್ಧೆ ನಡೆದಾಗ ಒಗಟು ಒಡೆ ಯುವ ಪ್ರಸಂಗ ಎಂದು ಕರೆಯಲಾಗುತ್ತದೆ. ಒಬ್ಬ ಒಂದು ಒಗಟಿನ ರ್‍ವಾಣ

ಹೇಳಿದರೆ ಇನ್ನೊಬ್ಬ ಆದಕ್ಕೆ ಉತ್ತರವಾಗಿ ಇನ್ನೊಂದು ರ್ವಾಣವನ್ನು ಹೇಳುತ್ತಾನೆ. ಜನಪದ ಸಾಹಿತ್ಯದಲ್ಲಿ ಒಗಟಿನ ಪ್ರಕಾರದಲ್ಲಿ ಇರುವಂತೆ ಸಮಸ್ಯೆ ಮತ್ತು ಉತ್ತರ ಸೇರಿಕೊಂಡ ಒಗಟು ರ್ವಾಣದಲ್ಲಿ ಇಲ್ಲವೆಂದು ತೋರುತ್ತದೆ. ಒಬ್ಬ ಹೇಳಿದ ಒಂದು ರ್ವಾಣಕ್ಕೆ ಪ್ರತಿ ತೂಕದ ರ್ವಾಣ ಹೇಳುವ ಬಗೆಗೆ ಒಗಟು ಒಡೆಯುವುದು ಎಂದು ಭಾವಿಸಲಾಗುತ್ತದೆಂದು ತೋರುತ್ತದೆ. ಅಂದರೆ ವಸ್ತು, ಗುಣ ಇವುಗಳು ರ್ವಾಣದ ಒಗಟು ಒಡೆದವನಿಗೆ ಪ್ರತಿಯಾಗಿ ಅವನ ರ್ವಾಣಕ್ಕೆ ಮೀರಿಸುವಂತೆ ಇರಬೇಕು ಎಂಬ ಭಾವನೆ. ಏಕೆಂದರೆ ಇವರು ಒಗಟು ಎಂದು ಹೇಳಿಕೊಳ್ಳುವ ರ್ವಾಣಗಳಲ್ಲಿ ಯಾವುದೇ ಬಗೆಯ ಸಮಸ್ಯೆಯಾಗಲಿ ಅಥವಾ ಉತ್ತರವಾಗಲಿ ಇರುವುದು ಕಂಡು ಬರುವುದಿಲ್ಲ. ಇಲ್ಲಿ ಸಮಸ್ಯೆ ಉತ್ತರಕ್ಕಿಂತ ವಸ್ತು-ಗುಣ-ಲಾಲಿತ್ಯ, ಬಂಧ ಇಂಥವೇ ಪ್ರಧಾನತೆಯನ್ನು ಪಡೆದುಕೊಳ್ಳುವಂತಿವೆ.

ಅಶ್ಲೀಲದ ಪ್ರಸಂಗಗಳನ್ನು ಗೌಪ್ಯವಾದ ಭಾಷೆಯಲ್ಲಿ ಹೇಳಲಾಗುತ್ತದೆ. ಅದರಲ್ಲಿ ಅರ್ಥ ಆಗದೆ ಇರುವಂತಹದೇನೂ ಇರುವುದಿಲ್ಲ. ಉತ್ತರ ರೂಪದಲ್ಲಿ ಹೊರಬಂದ ರ್ವಾಣವೂ ಇದೇ ಬಗೆಯ ಗೌಪ್ಯ ಭಾಷೆಯ ಬಂಧವನ್ನೇ ಪಡೆದಿರುತ್ತದೆ. ಆದರೆ ಕೊನೆಯಲ್ಲಿ ನಾನು ಒಗಟು ಒಡೆದು ಹೇಳಿದೆ ಎಂದು ಹೇಳಲಾಗುತ್ತದೆ.

"ಶಿರಹಟ್ಟಿ ಫಕೀರ ಸ್ವಾಮಿ ನಗಾರಿ ಮ್ಯಾಲೆ ಕೈ ಬೆಲ್ಲದ್ಹಂಗಾಪ್ಪಾ
ಒಡದ ಹೇಳತಾನಪ್ಪ ಗಡೇದ ಹುಡಗ
ಹುಲ್ಲುಲಗ್ಯೆಪೊ ಹುಲ್ಲುಲಗ್ಯೊ—
ಹುಲ್ಲುಲಗ್ಯೆಪೊ ಹುಲ್ಲುಲಗ್ಯೊ

## ರ್ವಾಣಗಳ ವರ್ಗೀಕರಣ ಮತ್ತು ಜನಪದ ಸಾಹಿತ್ಯದಲ್ಲಿ ರ್ವಾಣಗಳ ಸ್ಥಾನ

ರ್ವಾಣಗಳ ಅಧಿಕೃತ ಸಂಗ್ರಹವಿಲ್ಲದೆ ವರ್ಗೀಕರಣ ಮಾಡುವುದು ಸಮಂಜಸ ವಾದುದ್ದಲ್ಲ.[10] ಲಭ್ಯವಾದ ರ್ವಾಣಗಳನ್ನು ಹರವಿಕೊಂಡು ನೋಡಿದಾಗ ವಿಶಾಲವಾದ ತಳಹದಿಯ ಮೇಲೆ ಈ ಹಿಂದೆ ನಾವು ರ್ವಾಣಗಳ ಸ್ವರೂಪವನ್ನು ಗಮನಿಸುವಾಗ ಎರಡು ತಂಡಗಳಿರುವುದನ್ನು ಗಮನಿಸಿದ್ದೇವೆ. (ಇಬ್ಬರ ಮತ್ತು ನಾಲ್ಕು ಜನಗಳಿಂದ ಕೂಡಿದ್ದು.) ಆದರ ಮೇಲಿಂದ ವಿಸ್ತರಿಸಿಕೊಂಡು ಗಮನಿಸು ವುದು ಅಧ್ಯಯನದ ದೃಷ್ಟಿಯಿಂದ ಸೂಕ್ತವೆನಿಸುತ್ತದೆ.

---

10 ಅರವಿಂದ ಮಾಲಗತ್ತಿ: ಇವರು ಸಂಗ್ರಹಿಸಿದ ರ್ವಾಣಗಳು ೧೧. ಎಸ್. ಎಫ್. ಜಕ ಬಾಳ ಇವರು ಸಂಗ್ರಹಿಸಿದ ರ್ವಾಣಗಳು ೫, ಬಸವಗೌಡ ಪಾಟೀಲ ಇವರು ಸಂಗ್ರಹಿಸಿದ ರ್ವಾಣಗಳು ೧೫. ಒಟ್ಟು ೩೧ ರ್ವಾಣಗಳನ್ನು ಗಮನಿಸಿದೆ




'ರ್ವಾಣ ಜನಪದ ಕಾವ್ಯದ ಪ್ರಕಾರವೆಂಬುದರಲ್ಲಿ ಯಾವ ಅನುಮಾನ ಇಲ್ಲ'[11] ಎಂದು ಹೇಳಲಾಗುತ್ತದೆ. ಯಾವಾಗ 'ಅನುಮಾನ ಇಲ್ಲ' ಎಂಬ ಪದ ಪ್ರಯೋಗ ಆಗುತ್ತದೆಯೋ ಅದು ಅನುಮಾನದೊಂದಿಗೆ ಬಂದಿದೆ ಎಂಬುದು ಸ್ಪಷ್ಟ. ಈ ರ್ವಾಣಗಳು ಭಾವಗೀತೆಗಳಂತೆ, ತ್ರಿಪದಿ, ಲಾವಣಿಗಳಂತೆ ಹಾಡುವ ಹಾಡುಗಳಲ್ಲ. ಇವುಗಳಿಗೆ ವಿಶಿಷ್ಟವಾದ ಲಯದೊಂದಿಗೆ ಸೇರಿಕೊಂಡಿವೆ. ಅನ್ವಯವಾಗಿ ಸೂಚಿಸಬೇಕು ಎಂದರೆ ವೀರಭದ್ರ ದೇವರ ಒಡಬುಗಳಿಗೆ ಹೋಲುತ್ತವೆ. ಆದರೆ ರಸಾವೇಶ ಮಾತ್ರ ಭಿನ್ನತೆಯಿಂದ ಕೂಡಿರುತ್ತದೆ. ಬಹುಶಃ ಧ್ವನಿಗಳ ಹಿನ್ನೆಲೆಯಲ್ಲಿಯೇ ಗಾದೆ, ಒಗಟು, ಒಡಬು, ಒಡಪು, ರ್ವಾಣ, ಇವುಗಳನ್ನು ಜನಪದ ಸಾಹಿತ್ಯದ ಧ್ವನಿಯ ಹಿನ್ನೆಲೆಯಲ್ಲಿ ವಿಶೇಷವಾದ ಅಧ್ಯಯನ ನಡೆಸಬೇಕಾಗಿದೆ. ಪ್ರಯೋಗ ಮತ್ತು ಪರಿಣಾಮಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸುವುದು ತುಂಬಾ ಅಗತ್ಯವೆಂದೂ ತೋರುತ್ತದೆ. ಇಂತಹ ಲಯವನ್ನು 'ಗದ್ಯಾತ್ಮಕ ರ್ವಾಣಗಳು' ಹೊಂದಿವೆ. 'ಗದ್ಯಾತ್ಮಕ ರ್ವಾಣಗಳು' ಗದ್ಯಾತ್ಮಕ ಲಯವೂ ಸೇರಿದಂತೆ, ಲಾವಣಿಗಳಲ್ಲಿ ಇರುವ ಬೇರೆ ಬೇರೆ ಗತ್ತುಗಳಂತೆ ಹಾಗೂ ಇತರ ಗೀತೆ, ಭಾವಗೀತೆಗಳಂತೆ ಧ್ವನಿ ಎತ್ತಿ ಹಾಡುವ ಪದ್ಯಗಳೂ ಸೇರಿಕೊಂಡಿರುತ್ತವೆ.

ಉದಾ :

೧. ಗದ್ಯಾತ್ಮಕ ಲಯದ ರ್ವಾಣದ ಭಾಗ

ಏ ಹುಗ್ಗಿ ಹೊಸ ಒಂದ ಬಗ್ಗಿ ಹೊಡದರ
ಹಬ್ಬ ಹಿಡದೀತ್ತಪ್ಪ ಗಳಿಗಿ ಹೊತ್ತಿನ ತನಕ

ಏ ಹೆಸರ ಹೂಸೊಂದು ಬೆಸರಿ ಹೊಡದರ
ಕೊಸರ ಕೊಂಡ ಹೊಯ್ತೆಪ್ಪ ತುಳುಕ್ಯಾನ ಮರಿತನಕ

---

11 ಸಂ : ಬಸವಗೌಡ ಪಾಟೀಲ : ಹಿಂಗ ಬಿಟ್ರ ದೇಶಾ ಅಳ್ಯಾಳ—೪

೨. ಗಪದ್ಯಾತ್ಮಕ ಲಯದ ರ್‍ವಾಣದ ಭಾಗ

(ಗದ್ಯಭಾಗ

ಆಗ ಮುದುಕಿ ಏನಂತಾಳ ?
ನೀ ಹೇಳದಂಗ ಆಗೋಲದ್ಯಾಕ ಅಂದಳತಿ ಹುಡಗಾ
ಹಂಗಾರ ಇಬ್ಬರೂ ಕೂಡಿ ಬೇಸುಗು ಬಾ ಅಂದಳಲೆ ಹುಡುಗ
ಯಾಕಾಗೋಲದ್ಯಾಕ ಬಾ ಅಂತ ಇಬ್ಬರು ಬೇಸಾಕ
ಕುಂತರಲೆ ಹುಡಗಾ
ಬೇಸಾಕ ಕುಂತಾಗ ಮುದುಕಿ ಏನಂತಾಳ ?
ಎವ್ವಾ ಒಂದ ಹಾಡು ಅಂದಳಲೆ ಹುಡಗಾ
ಆಗ ಮುದುಕಿ ಏನಂತಾಳ ?
ಅಯ್ಯ ತಂಗಿ ನಾ ಇದ ಇಗರ ತಂಬಾಕ ಹಾಕೊಂಡಿನಿ
ನೀನ ಒಂದ ಹಾಡು ಅಂದಳಲೆ ಹುಡುಗಾ
ಅಂದಾಗ ಈಕಿ ಏನಂತಾಳ ?

(ಪದ್ಯ ಭಾಗ)

ಬಾಳಿಹಣ್ಣಿಗಿ ಹೋದಗಂಡ ಬರಬಾರ್‍ದ ಜೋಕುಮಾರ
ಅಲ್ಲಿ ಅವಗ ಮುರಕೊಂಡ ತಿನಲೆವ್ವ ಜೋಕುಮಾರ—
ನನ ಕೊಮರಾ
ಗಂಡ ಹೋದ ದಾರಿಗಿ ಬಂಡ ಬಡಿಯು ಜೋಕುಮಾರ
ಅಲ್ಲೆ ಅವ್ನ ಮುರಕೊಂಡ ತಿನಲೇವ್ವ ಜೋಕುಮಾರ—
ನನ ಕೊಮರಾ
ಅಲ್ಲೆ ಅವ್ನ ಹರಕೊಂಡ ತಿಂದರ ಜೋಕುಮಾರ
ಗಟ್ಯಾಗಿ ಪಾದ ಹಿಡದೇನ ಜೋಕುಮಾರ— ನನ ಕೊಮರಾ

(ಗದ್ಯ ಭಾಗ*)

ಎವ್ವಾ ಎವ್ವಾ ನನ್ನ ಆದುವು
ನೀ ಒಂದ ಹಾಡ ಹೇಳು ಅಂದಳಲೆ ಹುಡಗಾ
ಅಂದಾಗನ ಮುದುಕಿ ಎನಂದಳಲೆ ಹುಡಗಾ
................................

ಹೀಗೆ ಗದ್ಯ-ಪದ್ಯ ಒಳಗೊಂಡ ಮತ್ತು ಬರಿ ಗದ್ಯವೇ ಇದ್ದ ರ್‍ವಾಣಗಳು ಎರಡು ಭಾಗಗಳಾಗಿ ವರ್ಗೀಕರಿಸಬಹುದು. ಇವುಗಳಲ್ಲಿ ಗಪದ್ಯಾತ್ಮಕ ರ್‍ವಾಣಗಳು

* ಪದ್ಯದಲ್ಲಿ ಕೆಲಭಾಗ ಸ್ಥಳಾಭಾವದಿಂದ ಕೈಬಿಡಲಾಗಿದೆ.

ಕಥಾನಕಗಳೇ ಅಧಿಕವಾಗಿರುವುದು ಗೋಚರವಾಗುತ್ತದೆ. ಕೆಲಬಾರಿ ಹಾಗೆ ಒಂದೇ ಭಾವದ ಮೇಲೆ ಹೇಳಿಕೊಂಡು ಹೋದ ಠ್ವಾಣಗಳನ್ನು ಸಾಮಾನ್ಯ ಠ್ವಾಣಗಳು ಎಂದು ಪ್ರತ್ಯೇಕಿಸಲಾಗಿದೆ. ಆದರೆ ಗದ್ಯಾತ್ಮಕ ಠ್ವಾಣಗಳಲ್ಲಿ ಕಥಾನಕ ಠ್ವಾಣಗಳಿಗಿಂತ ಯಾವುದೋ ಒಂದು ಭಾವ; ಸಂದರ್ಭ, ಗುಣಕ್ಕೆ ಆರೋಪ ಮಾಡಿ ಹೇಳಿರುವ ಠ್ವಾಣ ಅಧಿಕವಾಗಿ ಕಂಡು ಬರುತ್ತವೆ. ಹೀಗಾಗಿ ಅವುಗಳಲ್ಲಿ ಒಳ ಪಂಗಡಗಳಾಗಿ ಸಾಮಾನ್ಯ ಮತ್ತು ಕಥಾನಗಳೆಂದು ಒಡೆದುಕೊಳ್ಳಲಾಗಿದೆ.

ಹೀಗೆ ಲಯ ಮತ್ತು ವಸ್ತು ವಿಶೇಷತೆಯಿಂದ ಈ ಸಾಹಿತ್ಯದ ಬಗೆಯನ್ನು ನಾವು ಪ್ರತ್ಯೇಕವಾಗಿ ನೋಡಿ ಅಧ್ಯಯನ ಮಾಡುವುದೇ ಸೂಕ್ತವೆನಿಸುತ್ತದೆ. ಅಂದರೆ ಜನಪದ ಸಾಹಿತ್ಯದಲ್ಲಿ ಒಟ್ಟು ಮೂರು ಭಾಗಗಳಾಗಿ ವಿಂಗಡಿಸಿ ನೋಡಬೇಕು.

೧. ಗದ್ಯ ಜನಪದ ಸಾಹಿತ್ಯ
೨. ಪದ್ಯ ಜನಪದ ಸಾಹಿತ್ಯ
೩. ಗದ್ಯ–ಪದ್ಯ ಲಯಾತ್ಮಕ ಜನಪದ ಸಾಹಿತ್ಯ

ಹೀಗೆ ವರ್ಗೀಕರಿಸಿ ಒಳ ವಿಭಾಗಗಳಾಗಿ ಮಾಡಿಕೊಂಡು ಅಧ್ಯಯನ ಮಾಡುವಾಗ 'ಪ್ರಯೋಗಿಕಥೆ'ಯ ವಿಶೇಷತೆ, ವೈವಿಧ್ಯತೆ, ಗುಣ, ಪರಿಣಾಮ, ವ್ಯತ್ಯಾಸ, ಇಂಥವೆಲ್ಲಾ ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ.

ಜನಪದ ಕಾವ್ಯ, ಜನಪದ ಕಥೆ, ಗಾದೆ, ಒಗಟು ಎಂದು ಪ್ರತ್ಯೇಕವಾಗಿ ಗುರುತಿಸಿ ಅಧ್ಯಯನ ಮಾಡುವಾಗ ಠ್ವಾಣಗಳನ್ನು ಇವು ಯಾವುದೇ ಒಂದು ಗುಂಪಿಗೆ ಸೇರಿ ಅಧ್ಯಯನ ಮಾಡುವುದು ಸರಿಯಲ್ಲ. ಜನಪದ ಸಾಹಿತ್ಯದಲ್ಲಿ ಠ್ವಾಣಗಳು ಒಂದು ಸ್ವತಂತ್ರ ರೂಪ. ಹೀಗಾಗಿ ಗಾದೆ, ಒಗಟುಗಳಂತೆ ಇವುಗಳನ್ನು ಪ್ರತ್ಯೇಕವಾದ ಸ್ಥಾನದಲ್ಲಿಯೇ ಇಟ್ಟು ನೋಡಬೇಕಾಗುತ್ತದೆ.

# ದ್ವಿತೀಯ ಭಾಷಾ ಕಲಿಕೆಯಲ್ಲಿ ದೋಷಗಳು: ಸ್ವನಿಮಾತ್ಮಕ ನೆಲೆ

## ಕನ್ನಡ($L_2$)—ತಮಿಳು($L_1$) ಸಂದರ್ಭ*

ಸೆಲ್ವಕುಮಾರಿ

೧

ಭಾರತದಂತಹ ಬಹುಭಾಷಾ ರಾಷ್ಟ್ರದಲ್ಲಿ ದ್ವಿಭಾಷಿಕವಲಯವೆಂಬುದು ಸಾಮಾನ್ಯವಾದುದು. ಈ ದ್ವಿಭಾಷಿಕ ವಲಯವೊಂದರ ಸಂದರ್ಭದಲ್ಲಿ ದ್ವಿತೀಯ ಭಾಷೆಯನ್ನು ಕಲಿಯುವ ಕಲಿಕೆಗಾರನು ಎದುರಿಸುವ ಸಮಸ್ಯೆಗಳು ಕಲಿಕೆಗಾರನ ಹಾಗೂ ಕಲಿಸುವವರ ಅನುಕೂಲಕ್ಕಾಗಿ ಅಭ್ಯಸಿಸಲು ಯೋಗ್ಯವಾದುದು.

ದ್ವಿತೀಯ ಭಾಷಾ ಸಂಪಾದನೆಯಲ್ಲಿನ ದೋಷಗಳು: ಎರಡು ಸ್ವತಂತ್ರ ಭಾಷೆಗಳ ಸಂಪಾದನೆಯಲ್ಲಿ ಹಾಗೂ ಎರಡು ವಾಂಶಿಕ ಭಾಷಾ ಸಂಪಾದನೆಯಲ್ಲಿ ಬೇರೆ ಬೇರೆಯಾಗಿರುತ್ತದೆ. ಎರಡು ಸೋದರ ಭಾಷೆಗಳಾದ ಕನ್ನಡ ಮತ್ತು ತಮಿಳು, ಈ ಭಾಷೆಗಳ ನಡುವೆ ದ್ವಿಭಾಷಿಕ ವಲಯವೊಂದು ಏರ್ಪಟ್ಟಾಗ ತಮಿಳ($L_1$)ನ್ನು ಪ್ರಥಮ ಭಾಷೆಯನ್ನಾಗಿ ಉಳ್ಳವರು ಕನ್ನಡ($L_2$)ವನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುವಾಗ ಎದುರಿಸುವ ಸಮಸ್ಯೆಗಳ ಬಗ್ಗೆ ನನ್ನ ವಿಚಾರ.

ಎರಡು ಭಾಷಾವಲಯಗಳಲ್ಲಿನ ಸಮಸ್ಯೆಗಳು ಧ್ವನಿಮಾತ್ಮಕವಾಗಿರಬಹುದು, ಶಬ್ದಕೋಶದಲ್ಲಾಗಿರಬಹುದು, ವಾಕ್ಯರಚನೆಯಲ್ಲಾಗಿರಬಹುದು ಅಥವಾ ಉಚ್ಚಾರದ್ದಾಗಿರಬಹುದು. ಒಳ್ಳೆಯ ಶಬ್ದಭಂಡಾರವನ್ನು ಹೊಂದಿರುವವರ ಸಮಸ್ಯೆ ಉಚ್ಚಾರದ್ದಾಗಿರಬಹುದು, ಸರಿಯಾದ ಉಚ್ಚಾರವನ್ನು ಹೊಂದಿರುವವರ ಸಮಸ್ಯೆ ಬರವಣಿಗೆಯದ್ದಾಗಿರಬಹುದು. ಕೆಲವು ದೋಷಗಳು ಎಲ್ಲ ಭಾಷಾ ಕಲಿಕೆಯ

---

* ೧೪ನೇ ಅಖಿಲಭಾರತ ದ್ರಾವಿಡ ಭಾಷಾ ಸಮ್ಮೇಳನದಲ್ಲಿ ಮಂಡಿಸಿದ ಲೇಖನ

ಸಂದರ್ಭದಲ್ಲೂ ನಡೆಯುವಂತಹ ಸಾರ್ವತ್ರಿಕ ದೋಷವಾಗಿರುತ್ತದೆ. ನನ್ನ ಚರ್ಚೆಯನ್ನು ಬರವಣಿಗೆಯ ಧ್ವನಿಮಾತ್ಮಕ ಸಮಸ್ಯೆಗಷ್ಟೇ ಸೀಮಿತಗೊಳಿಸಿಕೊಂಡಿದ್ದೇನೆ.

ಈ ರೀತಿಯ ವ್ಯತ್ಯಾಸಗಳಿಗೆ ಆಯಾ ಭಾಷೆಯಲ್ಲಿನ ಧ್ವನಿಗಳ ದೊರಕುವಿಕೆ ಮತ್ತು ಆಯಾ ಭಾಷೆಯ ರಚನಾವೈಶಿಷ್ಟ್ಯವು ಮುಖ್ಯ ಕಾರಣಗಳಾಗಿರುತ್ತವೆ. ದ್ವಿತೀಯ ಭಾಷೆಯನ್ನು ಕಲಿಯುವಲ್ಲಿ ಕಲಿಕೆಗಾರನೊಬ್ಬನು ತನ್ನ ಭಾಷೆಯ ಭಾಷಾರಚನೆಯನ್ನು ಈ ಭಾಷೆಯಲ್ಲಿ ಅಳವಡಿಸಿಕೊಳ್ಳಬಹುದು ಅಥವಾ ದ್ವಿತೀಯ ಭಾಷಾ ಶಬ್ದಕೋಶ ಹಾಗೂ ವ್ಯಾಕರಣಗಳನ್ನು ಗ್ರಹಿಸಿದ್ದರೆ ಆ ಭಾಷಾರಚನೆಗೆ ಹೊಂದಿಕೊಳ್ಳುವ ಪ್ರಯತ್ನದಲ್ಲಿರಬಹುದು, ಇಲ್ಲವೇ ಎರಡೂ ಭಾಷೆಗಳಲ್ಲಿ ಇಲ್ಲದಂತಹ, ಹೊಸದಾದ ನಿಯಮವೊಂದನ್ನು ರೂಪಿಸಿಕೊಳ್ಳುತ್ತಿರಬಹುದು. ಕನ್ನಡ ಭಾಷೆಯನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುವಲ್ಲಿ ಕಲಿಕೆಗಾರನು ಈ ಮೂರು ರೀತಿಯ ಸಾಧ್ಯತೆಗಳನ್ನು ಅಳವಡಿಸಿಕೊಳ್ಳುತ್ತಿರುವಂತೆ ತೋರುತ್ತದೆ.

## ೨

$L_2$ ವನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುವಾಗ $L_1$ ವಿದ್ಯಾರ್ಥಿಗಳು ಮಕ್ಕಳಾಗಿರಬಹುದು, ಅಥವಾ ವಯಸ್ಕರಾಗಿರಬಹುದು, ಮಾಡುವ ದೋಷಗಳನ್ನು ಈ ರೀತಿ ಗುರ್ತಿಸಿಕೊಳ್ಳಲಾಗಿದೆ.

೧. ಪದಮಧ್ಯದ ಅಘೋಷವನ್ನು ಗ್ರಹಿಸುವಲ್ಲಿ ದೋಷಗಳು.

i) ಅಘೋಷವನ್ನು ದ್ವಿತ್ವವಾಗಿಸುತ್ತಾರೆ.

ii) ಘೋಷ ಸ್ವನವನ್ನು ತರುತ್ತಾರೆ.

೨. ಪದಾದಿಯ ವ್ಯಂಜನ ದೀರ್ಘವಾಗಿದ್ದರೆ, ಎರಡನೆಯ ಅಥವಾ ಮೂರನೆಯ ವ್ಯಂಜನವನ್ನು ದ್ವಿತ್ವವಾಗಿಸುವುದು.

೩. ಣ(ṇ) ಮತ್ತು ನ(n) ಗಳ ಸಂಪಾದನೆಯಲ್ಲಿ ದೋಷ; ಇಲ್ಲಿ 'ಣ'ಕಾರ ಬರುವ ಕಡೆಗಳಲ್ಲಿ 'ನ' ಕಾರವನ್ನು 'ನ' ಬರಬೇಕಾದ ಕಡೆಗಳಲ್ಲಿ 'ಣ' ವನ್ನು ತರುತ್ತಿರುತ್ತಾರೆ. ಉದಾ: ಜಾಣ (ಜನ, ಜನಾ) ಭಾಷಣ (ಭಾಷನ) ರಾಮಾಯಣ (ರಾಮಾಯನ) ಎಣ್ಣೆ (ಎನೆ, ಎನ್ನೆ) ಮೊದಲಾದವು. ಈ ರೀತಿ ಆಗುವುದಕ್ಕೆ ತಮಿಳಿನಲ್ಲಿ ಮೂರ್ಧನ್ಯ, ಘರ್ಷ್ಯ ಹಾಗೂ ದಂತ್ಯಗಳೆಂಬ ಮೂರು ಅನುನಾಸಿಕಗಳಿದ್ದು ಕನ್ನಡದ ಈ ಎರಡು ಅನುನಾಸಿಕಗಳನ್ನು ಗುರುತಿಸಲು ಅಸಮರ್ಥರಾಗಿದ್ದಾರೆ ಎಂದು ಊಹಿಸಬಹುದು.

೪. ಊ (ū) ಸ್ವನದ ಸಂಪಾದನೆಯಲ್ಲಿ ದೋಷ: ಈ ಸ್ವನವನ್ನು ಗ್ರಹಿಸುವಲ್ಲಿನ ಅವರ ಅಸಮರ್ಥತೆಗೆ ಕಾರಣಗಳನ್ನ ಕೊಡಲಾಗುತ್ತಿಲ್ಲ. ಆದರೆ ಈ ರೀತಿಯ

ದೋಷಗಳನ್ನಂತೂ ಮಾಡುತ್ತಾರೆ. ಉದಾ: ಊಟ (ಊಡ, ಉಟ, ಉಟ್ಟ) ಕೂಗು (ಕುಗು, ಕೋಗು) ಗೂಳಿ (ಗುಳಿ, ಗುಲಿ, ಗುಲ್ಲಿ) ಊರು (ಉರು) ನೂಕು (ನುಕು, ನೋಕೂ).

೫. ಹ (h) ಸ್ವನ ಸಂಪಾದನೆಯಲ್ಲಿ ದೋಷ: ಈ ಸ್ವನವನ್ನು ಸಂಪಾದಿಸುವಲ್ಲಿ ಕಲಿಕೆಗಾರರು ಮಾಡುವ ದೋಷವನ್ನು ಭಾಷಾವಿಜ್ಞಾನಿಗಳು ಸಾರ್ವತ್ರಿಕ ದೋಷವೆಂದು ವಿವರಿಸುತ್ತಾರೆ. ಇಲ್ಲೂ ಕೂಡ ಅದೇ ನಿಯಮ ಕೆಲಸ ಮಾಡುತ್ತಿರಬಹುದೆಂದು ಊಹಿಸಬಹುದು. ಉದಾ: ಹಾಲು (ಅಲು, ಆಲು) ಹೂಮಾಲೆ (ಕುಮಾಲೆ, ವುಮಾಳೆ, ಊಮಾಲೆ) ಹೂವಾಡಿಗ (ಊವಾಡಿಗ, ಕುವಡಿಗ, ಕವಡಿಗ) ಮೊದಲಾದವು.

ಮೇಲೆ ಹೇಳಿದ ಆರು ರೀತಿಯ ದೋಷಗಳಲ್ಲಿ ಮೊದಲ ಎರಡು ದೋಷಗಳನ್ನು ನಾವು ಸಂಗ್ರಹಿಸಿದ ಆಧಾರಗಳ ಮೇಲೆ ವಿವರಿಸುತ್ತೇವೆ. ದೀರ್ಘಸ್ವರದ ಮುಂದೆ ವ್ಯಂಜನಗಳು ಬಂದಾಗ ಉಂಟಾಗುವ ದೋಷಗಳು ಈ ರೀತಿ ಇವೆ.

evev (ಉದಾ: (Mara, Kālu) ರಚನೆಯು ಕನ್ನಡಕ್ಕೆ ಸಹಜವಾದುದು. $L_1$ನ್ನು ಮಾತೃಭಾಷೆಯನ್ನಾಗಿ ಉಳ್ಳವರು $L_2$ನ್ನು ಕಲಿಯುವಾಗ eveev (Kāllu, nōddu) ರಚನೆಯನ್ನು ತರುತ್ತಾರೆ. ಇದು ಪದಾರಂಭದ ಒಂದು ಸ್ವನ ದೀರ್ಘವಾಗಿದ್ದಾಗಲೂ, ಎರಡು ಸ್ವನಗಳು ದೀರ್ಘವಾಗಿದ್ದಾಗಲೂ ಮತ್ತು ವಾಕ್ಯದಲ್ಲಿ ಇಂತಹ ರಚನೆಗಳು ಬಂದಾಗಲೂ ಈ ದೋಷಗಳು ಕಾಣಿಸಿಕೊಳ್ಳುತ್ತದೆ.

ಮೊದಲ ಒಂದು ಸ್ವನ ದೀರ್ಘವಿರುವುದಕ್ಕೆ:

| $L_2$ | $L_1$ |
|---|---|
| 1. bēku (ಬೇಕು) | bekku (ಬೇಕ್ಕು) |
| 2. ūta (ಊಟ) | ūtta-uda (ಊಟ್ಟ, ಉಡ) |
| 3. nānu (ನಾನು) | nānnu (ನಾನ್ನು) |
| 4. nīnu (ನೀನು) | nīnnu (ನೀನ್ನು) |
| 5. sīta (ಸೀತ) | sitta (ಸೀತ್ತ) |
| 6. āta (ಆಟ) | ātta (ಆಟ್ಟ) |

ಇದಕ್ಕೆ ವಿರುದ್ಧವಾಗಿ ಸಜಾತೀಯ ದ್ವಿತ್ವ ಇರುವಂತಹ ರಚನೆಗಳು ಕಾಣಿಸಿಕೊಂಡಾಗ ಹಿಂದಿನ ಸ್ವನವನ್ನು ದೀರ್ಘಗೊಳಿಸುತ್ತಾರೆ.

| | |
|---|---|
| 7. beccu (ಬೆಚ್ಚು) | bēccu (ಬೇಚ್ಚು) |
| 8. nimma (ನಿಮ್ಮ) | nīmma (ನೀಮ್ಮ) |
| 9. betta (ಬೆಟ್ಟ) | bētta (ಬೆಟ್ಟ) |
| 10. ajja (ಅಜ್ಜ) | ājja (ಅಜ್ಜ) |
| 11. eṇne (ಎಣ್ಣೆ) | ēṇne, ēnne (ಏಣ್ಣೆ, ಏನೆ) |
| 12. sutta (ಸುತ್ತ) | sōtta (ಸೋತ್ತ) |

ದೀರ್ಘಸ್ವರದ ಮುಂದೆ ವ್ಯಂಜನವಿರುವ ಕನ್ನಡದ ರಚನೆಯನ್ನು ಕೆಲವೊಮ್ಮೆ ದ್ವಿತ್ವಗೊಳಿಸುವುದಕ್ಕೆ ಬದಲಾಗಿ ಹ್ರಸ್ವವನ್ನು ತರುತ್ತಾರೆ.

| | |
|---|---|
| 13. nōdu (ನೋಡು) | nedu-nodu (ನೆಡು, ನೋಡು) |
| 14. ūru (ಊರು) | uru (ಉರು) |
| 15. nīnu (ನೀನು) | ninu (ನಿನು) |
| 16. mōsa (ಮೋಸ) | musa-musa (ಮುಸ, ಮೂಸ) |
| 17. cācu (ಚಾಚು) | cacu (ಚಾಚು) |
| 18. bīma (ಭೀಮ) | bima-biva (ಭಿಮ, ಭಿವ) |
| 19. nūku (ನೂಕು) | nuku (ನುಕು ನೊಕು) |
| 20. sīda (ಸೀದ) | sida-sida (ಸಿದ, ಸಿಡ) |

ಮೊದಲ ಎರಡು ಸ್ವನಗಳು ದೀರ್ಘವಿದ್ದಾಗ ಅವರಲ್ಲಿ ಕೆಲವೊಮ್ಮೆ ಇಂತಹ ದೋಷಗಳು ಕಾಣಿಸಿಕೊಂಡರೂ ಬಹಳಷ್ಟು ಸಲ ಬೇರೆಯದೇ ಆದ ದೋಷಗಳು ಕಂಡುಬರುತ್ತದೆ. ಎಲ್ಲರೂ ನಿರಂತರವಾಗಿ ಮೊದಲ ಎರಡು ಸ್ವನಗಳನ್ನು ಹ್ರಸ್ವಗೊಳಿಸುತ್ತಾರೆ.

| | |
|---|---|
| 21. nūkāta (ನೂಕಾಟ) | nukata-nukāta (ನುಕಟ, ನುಕಾಟ) |
| 22. bētaḷa (ಬೇತಾಳ) | betaḷa (ಬೆತಳ) |
| 23. yāvāga (ಯಾವಾಗ) | yavaga yavāga (ಯಾವಗ, ಯವಾಗ) |
| 24. jōkāli (ಜೋಕಾಲಿ) | jokali-jogali (ಜೊಕಲಿ ಜೊಗಲಿ) |
| 25. mātāḍu (ಮಾತಾಡು) | mataḍu matāḍu (ಮತಡು, ಮತಾಡು) |
| 26. sāmānu (ಸಾಮಾನು) | samanu, sāmanu (ಸಮನು, ಸಾಮನು) |
| 27. bādāmi (ಬಾದಾಮಿ) | badami, badāmī (ಬದಮಿ, ಬದಾಮೀ) |
| 28. ācāra (ಆಚಾರ) | acara (ಅಚರ) |

ವಾಕ್ಯಗಳಲ್ಲಿ ಇಂತಹ ರಚನೆಗಳು ಕಾಣಿಸಿಕೊಂಡಾಗಲೂ ಇವೇ ರೀತಿಯ ದೋಷಗಳು ಉಂಟಾಗುತ್ತವೆ.

೩

ಈ ರೀತಿಯ ದೋಷಗಳಿಗೆ ಕಾರಣಗಳನ್ನು ಹೀಗೆ ಗುರುತಿಸಿಕೊಳ್ಳಲಾಗಿದೆ.

ಮೊದಲ ಒಂದು ಸ್ವನ ದೀರ್ಘವಿದ್ದಾಗ ಸಜಾತೀಯ ದ್ವಿತ್ವವನ್ನು ತರುವುದಕ್ಕೆ ಅವರು $L_1$ ಭಾಷೆಯಿಂದ ಪ್ರೇರೇಪಿಸಲ್ಪಡುತ್ತಿದ್ದಾರೆ. ತಮಿಳು ಭಾಷೆಯಲ್ಲಿ ಅಘೋಷಗಳು ಪದಮಧ್ಯೆ ಬಂದಾಗ ದ್ವಿತ್ವಗಳಾಗಿಯೇ ಬರಬೇಕಾದ ನಿಯಮವಿರುವುದರಿಂದ ಈ ನಿಯಮವನ್ನು ಕನ್ನಡ ಕಲಿಯುವಲ್ಲಿಯೂ ಅಳವಡಿಸುತ್ತಾರೆ. ಉದಾ: āṭṭam (ಆಟ್ಟಂ) tōṭṭam (ತೋಟ್ಟಂ) ಮೊದಲಾದವು.

ಮೊದಲ ಎರಡು ಸ್ವನಗಳು ದೀರ್ಘವಿದ್ದಾಗ ಆಗುವ ದೋಷಗಳಿಗೆ ಎರಡು ರೀತಿಯ ಕಾರಣಗಳನ್ನು ಗುರುತಿಸಬಹುದು. ೧. ತಮಿಳು ಭಾಷೆಯಲ್ಲಿ ಮೊದಲ ಎರಡು ಸ್ವನಗಳು ದೀರ್ಘವಾಗಿರುವ ರಚನೆಗಳು ಬಹಳಷ್ಟು ಸಲ ಸಂಸ್ಕೃತದಿಂದ ಪಡೆದು

ಕೊಂಡಂತಹವುಗಳಾಗಿರುತ್ತವೆ ಅಥವಾ ಎರಡು ಕೂಡು ಪದಗಳಾಗಿರುತ್ತವೆ. ಉದಾ: āgāsakkatiri (ಆಗಾಸಕ್ಕತ್ತಿರಿ), āgākkaṇanga (ಆಗಾಕ್ಕಣಂಗ), inākkadir (ಈನಾಕ್ಕದಿರ್), ūdāṭṭam (ಊಡಾಟ್ಟಂ), inakkumari (ಈನಾಕ್ಕುಮರಿ). ಸಂಧಿಯಾಗುವಾಗ ದ್ವಿತ್ವಗಳಾಗಿಯೇ ಅವುಗಳು ಬರುವುದರಿಂದ ಕನ್ನಡದಲ್ಲಿ ಅಂತಹ ರಚನೆಗಳು ಕಾಣಿಸಿಕೊಂಡಾಗ ಇಲ್ಲೂ ಎರಡು ಪದಗಳು ಕೂಡಿರುವುದೆಂಬ ಗ್ರಹಿಕೆಯಿಂದ ದ್ವಿತ್ವವನ್ನು ತರುತ್ತಾರೆ.

ಎರಡನೆಯದಾಗಿ ಮೊದಲ ಎರಡು ದೀರ್ಘಸ್ವನಗಳನ್ನು ಹ್ರಸ್ವವಾಗಿಸುವುದಕ್ಕೆ ಕಾರಣಗಳೆಂದರೆ, ಅವರು $L_1$ನ ರಚನೆಯನ್ನು ಪೂರ್ತಿಯಾಗಿ ಬಿಡುತ್ತಿದ್ದಾರೆ ಮತ್ತು $L_2$ನ್ನು ಇನ್ನೂ ಪೂರ್ತಿಯಾಗಿ ಸಂಪಾದಿಸಿಲ್ಲ ಹಾಗೂ ಆ ರೀತಿ ಬಂದಂತಹ ಪದಗಳು ಕೂಡುಪದಗಳಾಗಿಲ್ಲವೆಂಬ ಅರಿವು ಎಲ್ಲೋ ಅವರಲ್ಲಿ ಇರುವುದರಿಂದ ಒಂದು ಮಧ್ಯವರ್ತಿ ನಿಯಮವನ್ನು ರೂಪಿಸಿಕೊಳ್ಳುತ್ತಿರಬಹುದು. ಇದಕ್ಕೆ ತಕ್ಕಷ್ಟು ಆಧಾರಗಳ ಕೊರತೆಯಿದೆ.

೪

ದ್ವಿತೀಯ ಭಾಷಾ ಕಲಿಕೆಯ ಪ್ರಮುಖ ಉದ್ದೇಶ ಸಂವಹನ. ಸಂವಹನದ ಕೊರತೆ ಇರುವವರಲ್ಲಿ ಈ ರೀತಿಯ ದೋಷಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಕನ್ನಡ ಭಾಷಾ ಸಂಪರ್ಕವಿರುವ ಮಕ್ಕಳಲ್ಲಿ ಹಾಗೂ ವಯಸ್ಕರಲ್ಲಿ ಈ ದೋಷಗಳು ಕಡಿಮೆ ಪ್ರಮಾಣದಲ್ಲೂ, ಸಂಪರ್ಕ ಕಡಿಮೆ ಇರುವ ಮಕ್ಕಳಲ್ಲಿ ಮತ್ತು ತಮಿಳನ್ನು ಕಲಿತು ಸಂಪರ್ಕದಿಂದ ದೂರ ಇರುವ ವಯಸ್ಕರಲ್ಲಿ ಇದು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಒಟ್ಟಾರೆಯಾಗಿ ಮಕ್ಕಳಿಗಿಂತ ವಯಸ್ಕರಲ್ಲಿ ಈ ದೋಷಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಭಾಷೆಯ ಸಂಪರ್ಕವಿರುವವರು $L_2$ವನ್ನು ಸರಿಯಾಗಿ ಗ್ರಹಿಸುತ್ತಲೇ ಅಪ್ರಜ್ಞಾವಸ್ಥೆಯಲ್ಲಿ ಕೆಲವೊಮ್ಮೆ ಇಂತಹ ದೋಷಗಳನ್ನು ಮಾಡುತ್ತಾರೆ ಎಂದು ಹೇಳಬಹುದು.

ಇಷ್ಟೆಲ್ಲ ಇದ್ದಾಗಲೂ ಈ ದೋಷಗಳು ಬಹಳ ಕಾಲ ಮುಂದುವರಿಯುತ್ತದೆ ಎಂದು ಹೇಳಲಾಗುವುದಿಲ್ಲ. ಅಧ್ಯಯನದ ವಿಸ್ತಾರವನ್ನು ಹೆಚ್ಚಿಸಿದಂತೆ ಈ ದೋಷಗಳು ನಿಲ್ಲದೆ ಹೋಗಬಹುದು; ಬೇರೆಯೇ ರೀತಿಯ ದೋಷಗಳು ಗೋಚರವಾಗಬಹುದು. ಈ ದಿಕ್ಕಿನಲ್ಲಿ ಹೆಚ್ಚಿನ ಅಧ್ಯಯನಕ್ಕೆ ಎಡೆಮಾಡಿಕೊಡುವುದಷ್ಟೇ ನನ್ನ ಈ ಲೇಖನದ ಉದ್ದೇಶ.

---

ಈ ಲೇಖನಕ್ಕೆ ಸಾಮಗ್ರಿಯನ್ನು ನಾನು ೯ ರಿಂದ ೧೪ ವರ್ಷಗಳ ಶಾಲಾ ಮಕ್ಕಳಿಂದಲೂ ಮತ್ತು ಕನ್ನಡ ಕಲಿಯಲು ಬರುವ ಉದ್ಯೋಗಿಗಳಿಂದಲೂ ಸಂಗ್ರಹಿಸಿದ್ದೇನೆ.

# ಕೊಡಗು ಭಾಷೆಯ ಆಧುನೀಕರಣ - ಒಂದು ನೋಟ*

ರತಿ, ಎಂ.ಟಿ.

ಭಾಷೆಯ ಆಧುನೀಕರಣವೆಂದರೆ, ಫರ್ಗುಸನ್ ಅಭಿಪ್ರಾಯದಂತೆ, ಜಗತ್ತಿನ ಭಾಷಾಸಮುದಾಯದಲ್ಲಿ ಅಂತರ್ಗತವಾದ ಭಾಷೆಗಳು ಅರ್ಹವಾದ ಕೆಲವು ಸಾಧನೆಗಳೊಂದಿಗೆ ಆಧುನಿಕ ಮಾದರಿಗಳನ್ನು ಸಂಭಾಷಣೆಯಲ್ಲಿ ಅಳವಡಿಸಿಕೊಳ್ಳುವುದು. ಭಾಷೆಯ ಆಧುನೀಕರಣವು ಮುಖ್ಯವಾಗಿ ಎರಡು ನೆಲೆಗಳಲ್ಲಿ ನಡೆಯಲು ಸಾಧ್ಯ. ಮೊದಲನೆಯದಾಗಿ, ಹೊಸ ಹೊಸ ಶಬ್ದಗಳು ಹಾಗೂ ಅಭಿವ್ಯಕ್ತಿಗಳು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಸೇರ್ಪಡೆಯಾದಾಗ ಶಬ್ದಕೋಶಗಳೊಂದಿಗೆ ಭಾಷೆ ವಿಸ್ತೃತಗೊಳ್ಳುವುದರೊಂದಿಗೆ ಭಾಷೆ ಅಭಿವೃದ್ಧಿಗೊಳ್ಳುತ್ತದೆ. ಎರಡನೆಯದಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಔದ್ಯೋಗಿಕವಾಗಿ ಅಭಿವೃದ್ಧಿ ಹೊಂದುವುದರೊಂದಿಗೆ ಭಾಷೆ ಆಧುನೀಕರಣಗೊಳ್ಳುತ್ತದೆ. (ಫರ್ಗುಸನ್ : ೧೯೬೮ : ೩೨)

ಕೊಡಗು ಭಾಷೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಈ ಎಲ್ಲಾ ದ್ರಾವಿಡ ಭಾಷೆಗಳಂತೆ ಅಭಿವೃದ್ಧಿ ಹೊಂದಿದ ಭಾಷೆಯಾಗಿರದೆ ಕೇವಲ ಅಲ್ಪ ಸಂಖ್ಯಾತರಾಡುವ ಆಡುಭಾಷೆಯಾಗಿ ಉಳಿದುಕೊಂಡಿದೆ. ಈ ಭಾಷೆ ಲಿಪಿರಹಿತವಾಗಿರುವುದರಿಂದ ಸಾಹಿತ್ಯ ಬರವಣಿಗೆಗೆ ಕನ್ನಡ ಲಿಪಿಯನ್ನು ಅವಲಂಬಿಸಬೇಕಾಗಿದೆ. ಈ ಭಾಷೆಯಲ್ಲಿ ಸಾಹಿತ್ಯವು ಬರವಣಿಗೆಯ ರೂಪದಲ್ಲಿ ಬಂದಿರುವುದು ಅಲ್ಪ. ಈಚೆಗೆ ಹತ್ತು ವರ್ಷಗಳಿಂದ ಎರಡು ವಾರಪತ್ರಿಕೆಗಳು (ಬ್ರಹ್ಮಗಿರಿ ಹಾಗೂ ಜಮ್ಮನಂಗಡ) ಕೊಡಗು ಭಾಷಾಭಿವೃದ್ಧಿಯ ಕಡೆಗೆ ತಮ್ಮ ಗಮನವನ್ನು ಹರಿಸಿವೆ.

ಸಾಮೂಹಿಕ ಮಾಧ್ಯಮಗಳು ಒಂದು ಭಾಷೆಯ ಆಧುನೀಕರಣದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ. ಕನ್ನಡ ಭಾಷೆ ಲಿಪಿಸಹಿತಭಾಷೆಯಾಗಿರುವುದರಿಂದ

---

* ೧೮ನೇ ಅಖಿಲ ಭಾರತ ದ್ರಾವಿಡ ಭಾಷಾ ಸಮ್ಮೇಳನದಲ್ಲಿ ಮಂಡಿಸಿದ ಲೇಖನ.

ಈ ಭಾಷೆಯಲ್ಲಿ ಆಧುನೀಕರಣ ಮತ್ತು ಶಿಷ್ಟೀಕರಣ (Standardization) ಇವುಗಳ ಮಟ್ಟ ಬೇರೆಯಾಗಿದೆ. ಈ ಭಾಷೆ ಶಿಷ್ಟೀಕರಣಕ್ಕೆ ಸಂಸ್ಕೃತ ಭಾಷೆಯನ್ನು ಅವಲಂಬಿಸಿದರೆ, ಆಧುನೀಕರಣಕ್ಕೆ ಇಂಗ್ಲಿಷ್ ಭಾಷೆಯನ್ನು ಅವಲಂಬಿಸಿದೆ. ಆದರೆ ಕೊಡಗು ಜಿಲ್ಲೆ ವಿಜ್ಞಾನ, ಆಡಳಿತ, ಶಿಕ್ಷಣ ಇವೇ ಮೊದಲಾದ ಕ್ಷೇತ್ರಗಳಿಗೆ ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳನ್ನು ಅವಲಂಬಿಸಿಕೊಂಡಿದ್ದರೂ, ಆಡು ಭಾಷೆ ಕೊಡಗು. ಆದುದರಿಂದ ಈ ಭಾಷೆಯಲ್ಲಿ ಸಾಮೂಹಿಕ ಮಾಧ್ಯಮಗಳು ಸೀಮಿತವಾಗಿರುವುದರಿಂದ ಭಾಷೆಯ ಶಿಷ್ಟೀಕರಣ ಹೆಚ್ಚು ಕಂಡು ಬರದಿರುವುದರಿಂದ ಆಧುನೀಕರಣದ ಆಯಾಮಗಳನ್ನು ಸೀಮಿತ ನೆಲೆಗಳಲ್ಲಿ ಗುರುತಿಸಬಹುದು.

೧. ಸಂಬಂಧವಾಚಕ ಪದಗಳಲ್ಲಿ ಆಧುನೀಕರಣ ಮತ್ತು ಇವು ಬಳಕೆಯಾಗುವ ಸಂದರ್ಭಗಳು

ಭಾರತದ ಎಲ್ಲಾ ಭಾಷೆಗಳು ಇತರ ಭಾಷೆಗಳಿಂದ, ಆದರಲ್ಲೂ ಇಂಗ್ಲಿಷ್ ಭಾಷೆಯ ಶಬ್ದಗಳನ್ನು ನಿಚ್ಚಳವಾಗಿ ಸ್ವೀಕರಿಸಿವೆ. ದಿನಬಳಕೆಯ ಪದಗಳು, ಸಂಬಂಧವಾಚಕ ಪದಗಳು, ನೇರವಾಗಿ ಭಾಷಾಂತರಿಸಿಕೊಂಡ ಪದಗಳು, ಇವುಗಳೆಲ್ಲವೂ ಆಧುನೀಕರಣದ ಹೆಜ್ಜೆಯಾದರೂ ಅವುಗಳ ಬಳಕೆಯ ಸಂದರ್ಭಗಳ ಆಧಾರದಿಂದ ಆಧುನೀಕರಣವನ್ನು ಗುರುತಿಸಬೇಕಾಗುತ್ತದೆ. ಇವುಗಳನ್ನು ಸಂಭಾಷಣೆಗಳ ಆಧಾರದಿಂದ ಗುರುತಿಸಲಾಗಿದೆ.

೧. ಇವ ನಾಡ ಸಿಸ್ಟರ್
(ಇವಳು ನನ್ನ ಸಹೋದರಿ)

೨. ನಿಂಗ ಎಚ್ಚಕ್ ಜನ ಸಿಸ್ಟರ್‌ಸ ಪಿಂಞ ಬ್ರದರ್‌ಸ?
(ನೀವು ಏಷ್ಟು ಜನ ಸೋದರಿಯರು ಹಾಗೂ ಸೋದರರು)

೩. ನೀಡ ಫಾದರ್ ಎಂತ ಮಾಡಿಯಂಡ್ ಉಂಡ್?
(ನಿನ್ನ ತಂದೆ ಏನು ಕೆಲಸದಲ್ಲಿದ್ದಾರೆ?)

೪. ನಾಡ ಮದರ್‌ನ ಆಸ್ಪತ್ರೆಕ್ ಕೂಟಿಯಂಡ್ ಪೋಂಡು
(ನನ್ನ ತಾಯಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು)

ಇಂಥ ಸಂಭಾಷಣೆಗಳು ವಿದ್ಯಾವಂತರೊಂದಿಗೆ ಹಾಗೂ ಕೊಡಗು ಭಾಷೆ ಮಾತೃಭಾಷೆಯಾಗಿರದ, ದ್ವಿತೀಯ ಭಾಷೆ(ಕಲಿತ ಭಾಷೆ) ಯವರೊಂದಿಗೆ ನಡೆಯುತ್ತವೆ. ಒಬ್ಬರನೊಬ್ಬರು ಪರಿಚಯಿಸಿಕೊಡುವ ಸಂದರ್ಭದಲ್ಲಿ ಸಂಬಂಧವಾಚಕ ಪದಗಳ ಬಳಕೆ ಈ ಕೆಳಗಿನಂತಿರುತ್ತವೆ.

ನಾಡ ಸಿಸ್ಟರ್, ಬ್ರದರ್, ಫಾದರ್, ಮದರ್, ಸನ್, ಡಾಟರ್. ಇನ್ನು ಕೆಲವು ಸಂಬಂಧವಾಚಕ ಪದಗಳನ್ನು ಕೊಡಗು ಭಾಷೆಯಲ್ಲಿಯೇ ಬಳಸು

ತ್ತಾರೆ. ಉದಾ : ನಾಡ ಮಾಂವಿ (ಅತ್ತೆ), ಮಾಂವ (ಮಾಂವ), ಮಚ್ಚಿಣ್‌ಚಿ (ನಾದಿನಿ), ಮಚ್ಚಿಣ (ಭಾವಮೈದುನ). ಮೈಮ*(ಸೊಸೆ), ಮೈಮ (ಅಳಿಯ), ಈ ಮೇಲೆ ಉದಾಹರಿಸಿದ ಪದಗಳಿಗೆ ಅಥವಾ ವ್ಯಕ್ತಿಗಳನ್ನು ಪರಿಚಯಿಸುವಲ್ಲಿ ದೇಶ್ಯಪದ (native word) ಗಳನ್ನೇ ಬಳಸುತ್ತಾರೆ.

೨. ದಿನ ಬಳಕೆಯ ಶಬ್ದಗಳಲ್ಲಿ ಆಧುನೀಕರಣ

ಇಂಗ್ಲಿಷ್ ಭಾಷೆಯ ಕೆಲವು ಪದಗಳಿಗೆ ಸಮಾನಾರ್ಥಕ ಪದಗಳ ಕೊರತೆ ಸ್ಥಳೀಯ ಭಾಷೆಯಲ್ಲಿ ಕಂಡುಬರುವುದರಿಂದ ಅಂಥ ಶಬ್ದಗಳನ್ನು ನಮ್ಮ ಭಾಷೆಯ ಅರ್ಥಕೋಶಕ್ಕೆ ಸ್ವೀಕರಿಸಿಕೊಳ್ಳುವುದು ಸಹಜ. ಆದರೆ ಕೊಡಗು ಭಾಷೆಯಲ್ಲಿ ಕೆಲವು ನಿರ್ದಿಷ್ಟ ಸಂದರ್ಭಗಳ ಮೇಲೆ ಆಧುನೀಕೃತಗೊಂಡಿದೆ ಎಂಬುದಕ್ಕೆ ಸಾಂಸ್ಕೃತಿಕ ಕಾರಣ ಎಂದು ಹೇಳುತ್ತಾ ಶಬ್ದಗಳ ಆಧಾರದೊಂದಿಗೆ ಅರ್ಥೈಸಲು ಪ್ರಯತ್ನಿಸುತ್ತಿದ್ದೇನೆ.

ಕೊಡವ ಜನಾಂಗ ಸ್ತ್ರೀಯರು ಸಾಂಪ್ರದಾಯಿಕವಾಗಿ ಉಡುವ ಸೀರೆಗೆ 'ಕೊಡವ ಪೊಡಿಯ' ಎಂದು ಹೇಳುವುದಲ್ಲದೆ 'ನೆರಿಗೆ' (Frill) ಗೆ 'ನೆರಿ' ಎಂದು ಹೇಳುತ್ತಾರೆ. ಆದರೆ ಕನ್ನಡಿಗರು ಉಡುವ ಮಾದರಿಯಲ್ಲಿ ಸೀರೆ ಉಡಲ್ಪಡುವ ಸಂದರ್ಭದಲ್ಲಿ (Can Saree) ಎಂದೂ, ಹಾಗೂ 'ನೆರಿಗೆ'ಗೆ (Frill) ಎಂದೇ ಹೇಳುತ್ತಾರೆ. ಹಾಗೆಯೇ ಕಿವಿಗೆ ತೊಡುವ ಸಾಂಪ್ರದಾಯಿಕ ಆಭರಣಗಳನ್ನು 'ಓಲೆ' ಎಂದು ಆಧುನಿಕ ಮಾದರಿಯ ಆಭರಣಗಳನ್ನು (Ear ring) ಎಂದೂ ಹೇಳುತ್ತಾರೆ. ಅಂದರೆ ಇಲ್ಲಿ ಎರಡು ಸಂಸ್ಕೃತಿಗಳ ನಡುವೆ ಇರುವ ವ್ಯತ್ಯಾಸವನ್ನು ಭಾಷೆಯಿಂದ ಗುರುತಿಸಬಹುದು.

೩. ಅನ್ಯದೇಶ್ಯ ಪದಗಳೊಂದಿಗೆ (ಇಂಗ್ಲಿಷ್ ಅಥವಾ ಕನ್ನಡ) ದೇಶ್ಯ ಪದಗಳನ್ನು ಸೇರಿಸಿ ಹೊಸ ಸಮಾಸ ಪದಗಳ ಸೃಷ್ಟಿ :

ಹೊಸ ಸಮಾಸ ಪದಗಳ ಸೃಷ್ಟಿಯನ್ನು ಎರಡು ಸಂಸ್ಕೃತಿಗಳ ಒಕ್ಕೂಟವೆಂದು ಹೇಳುವುದಕ್ಕಿಂತ ಹೆಚ್ಚಾಗಿ ಈ ಸಂದರ್ಭದಲ್ಲಿ ಸಾಮೂಹಿಕ ನಾಮಪದವಾಗಿ ಬಳಕೆಗೊಳ್ಳುತ್ತದೆ.

೧. —ಕಾರ ಎಂಬ ಸ್ಥಳೀಯ ಭಾಷಾ ಪ್ರತ್ಯಯದ ಸೇರ್ಪಡೆ.

ಉದಾ : ಸ್ಕೂಲ್‌ಕಾರ (ಸ್ಕೂಲಿನವರು), ಟೀಂಕಾರ (ಟೀಮಿನವರು), ಫಾರಿನ್‌ಕಾರ (ವಿದೇಶಿಯರು), ಟೌನ್‌ಕಾರ (ಪಟ್ಟಣವಾಸಿಗಳು), ಎಸ್.ಎಸ್.

---

* ಮೈಮ (ಸೊಸೆ) Maima, ಮೈಮ (ಅಳಿಯ) Maim'e' ಮಧ್ಯೀಕೃತ [centralised] ಸ್ವರಗಳೊಂದಿಗೆ ವ್ಯತ್ಯಾಸಗೊಳಿಸಬಹುದು.

ಎಲ್.ಸಿ.ಕಾರ (೧೦ನೇ ತರಗತಿ ತೇರ್ಗಡೆಯಾದವರು), ಪಿ.ಯು.ಸಿ.ಕಾರ, ಡಿಗ್ರಿ ಕಾರ ಮೊದಲಾದವು ಇವುಗಳೊಂದಿಗೆ ಮಿನಿಸ್ಟರ್‌ಸ, ಸಿಸ್ಟರ್‌ಸ, ಸ್ಟೂಡೆಂಡ್‌ಸ, ಮಾಸ್ಟರ್‌ಸ ಈ ಪದಗಳಲ್ಲಿ ಕಂಡುಬರುವ 'ಸ' ಪ್ರತ್ಯಯು 'ಸ್' ಎಂಬ ಬಹು ವಚನ ಪ್ರತ್ಯಯವಾಗಿದ್ದು ಸಾಮೂಹಿಕ ನಾಮಪದವಾಗಿ ಬಳಕೆಗೊಳ್ಳುತ್ತವೆ.

೨. ಗುಂಪ್‌ಡ್ಯಾನ್ಸ್ (Group dance), ಸಿಲ್ಕ್‌ಪೊಡಿಯ (Silk saree), ಫ್ಯಾನ್ಸಿ ಬಟ್ಟೆ (Fancy Cloth) ಇಲ್ಲಿ ಗುಂಪ್, ಪೊಡಿಯ, ಬಟ್ಟೆ ಇವೆಲ್ಲ ಸ್ಥಳೀಯ ಭಾಷಾ ಪದಗಳಾಗಿದ್ದು ಡ್ಯಾನ್ಸ್, ಸಿಲ್ಕ್, ಫ್ಯಾನ್ಸಿ ಇವುಗಳು ಅನ್ಯದೇಶ್ಯ ಪದಗಳು.

೩. ಇಂಗ್ಲಿಷ್ ಭಾಷೆಯಿಂದ ನೇರವಾಗಿ ಕೊಡಗು ಭಾಷೆಗೆ ಭಾಷಾಂತರ ಮಾಡಿಕೊಂಡ ಪದಗಳು.

ಉದಾ : Cold Storage (ತಂಪಂಗಡಿ)
Guest House (ಬೆಂದು ಬಿಡಾರ)

ಇಲ್ಲಿ 'Cold' ಎಂಬ ಇಂಗ್ಲಿಷ್ ಪದಕ್ಕೆ 'ತಂಪು' ಎಂಬುದು ದೇಶ್ಯ ಭಾಷೆಯಲ್ಲಿ ಸಮನಾರ್ಥಕ ಪದವಾಗಿದೆ. ಆದರೆ 'Storage' ಎಂಬ ಪದಕ್ಕೆ 'ಅಂಗಡಿ' ಎನ್ನುವುದು ಸಮನಾರ್ಥಕ ಪದವಲ್ಲ. ಆದರೆ ಇಲ್ಲಿ ಹೊಸ ರೀತಿಯ ಪದಸೃಷ್ಟಿಯನ್ನು ಕಾಣಬಹುದು. 'House' ಎಂಬ ಪದಕ್ಕೆ 'ಮನೆ' ಎಂಬ ಸಮಾನ ಪದ ದೇಶ್ಯ ಭಾಷೆಯಲ್ಲಿದ್ದರೂ 'ಬಿಡಾರ' ಎಂಬ ಪದವನ್ನಿಟ್ಟುಕೊಳ್ಳ ಲಾಗಿದೆ. ಈ ಪದ ಬಳಕೆಗೆ ಕಾರಣವನ್ನು ವಿವರಣೆಯೊಂದಿಗೆ ಹೇಳಬಹುದು.

ಕೊಡಗಿಗೆ ತೋಟ ಕೆಲಸಕ್ಕೆಂದು ಹೊರಗಿನಿಂದ ಬಂದ ಜನರು ಇಳಿದು ಕೊಳ್ಳಲು ಒಂದು ಕಟ್ಟಡವನ್ನು ನಿರ್ಮಾಣ ಮಾಡಿಕೊಳ್ಳುತ್ತಾರೆ. ಈ ಕಟ್ಟಡಕ್ಕೆ ಸ್ಥಳೀಕರು 'ಬಿಡಾರ' ಎಂದು ಕರೆಯುತ್ತಾರೆ. ಇದೇ ಆಧಾರದ ಮೇಲೆ ಅತಿಥಿಗಳು ಹೊರಗಿನವರಾದುದರಿಂದ ಅವರು ಇಳಿದುಕೊಳ್ಳುವ ಕಟ್ಟಡಕ್ಕೆ 'ಬೆಂದು ಬಿಡಾರ' (Guest House) ಎಂದು ತರ್ಜುಮೆಗೊಂಡಿದೆ.

ಈ ಪದವು ಸಾಮಾಜಿಕ ಭಾಷಾ ವಿಜ್ಞಾನದ ದೃಷ್ಟಿಯಿಂದ ಹೆಚ್ಚು ಮಹತ್ವ ವನ್ನು ಪಡೆದುಕೊಂಡಿದೆ.

೫. ಭಾಷಾಭಿವೃದ್ಧಿಗೆ ಸ್ಥಳೀಕರ ಸಲಹೆಗಳೊಂದಿಗೆ ಆಧುನೀಕರಣದ ಆರಂಭ :

ಈ ಕೆಳಗೆ ವಿವರಿಸಿದ ಸಲಹೆಗಳನ್ನು ೧೯೭೭ರಲ್ಲಿ ವೀರರಾಜಪೇಟೆಯಲ್ಲಿ ನಡೆದ 'ಕೊಡಗು ಭಾಷಾ ಪರಿಷತ್'ನಲ್ಲಿ ಪ್ರಕಟಿಸಿದ ಲೇಖನಗಳಿಂದ ಆಯ್ದುಕೊಳ್ಳ ಲಾಗಿದೆ.

೧. ಕೊಡಗು ಭಾಷೆಯಲ್ಲಿ (ಕನ್ನಡ ಲಿಪಿ ಆಧಾರಿತ) ಬರೆದ ಬಾಲಬೋಧಿನಿ ಯನ್ನು ಮಕ್ಕಳಿಗೆ ಆರಂಭದಿಂದಲೇ ಬೋಧಿಸಬೇಕು.

೨. ವೈಯಕ್ತಿಕ ಪತ್ರವ್ಯವಹಾರಗಳು ಮಾತೃಭಾಷೆಯಲ್ಲಿರುವಂತಾಗಬೇಕು.

೩. ಪ್ರಾದೇಶಿಕ ಶಾಲಾ ಕಾಲೇಜುಗಳಲ್ಲಿ ಭಾಷಣ ಸ್ಪರ್ಧೆ, ಪ್ರಬಂಧ, ನಾಟಕ, ಕಾವ್ಯವಾಚನಗಳು ಕೊಡಗು ಭಾಷೆಯಲ್ಲಿದ್ದು, ಬಹುಮಾನಗಳೊಂದಿಗೆ ಪ್ರೋತ್ಸಾಹಿಸುವಂತಾಗಬೇಕು.

೪. ವಿವಿಧ ಭಾಷೆಗಳ ಶ್ರೇಷ್ಠ ಕೃತಿಗಳು ಕೊಡಗು ಭಾಷೆಗೆ ತರ್ಜುಮೆಯಾಗಬೇಕು.

೫. ಜಾನಪದ ಹಾಡು ಸಂಗ್ರಹಣೆ, ದಿನಪತ್ರಿಕೆಗಳು, ಶಬ್ದಕೋಶ ರಚನೆ, ಅಚ್ಚುಕೂಟ ಹಾಗೂ ಸಿನಿಮಾಗಳು ದೇಶ್ಯ ಭಾಷೆಯಲ್ಲಿರಬೇಕು.

೬. ತಿಂಗಳಿಗೊಮ್ಮೆಯಾದರೂ ಸಮ್ಮೇಳನದಲ್ಲಿ ಗಣ್ಯರೆಲ್ಲ ಸೇರಿ ಭಾಷಾಭಿವೃದ್ಧಿ ಬಗ್ಗೆ ಚರ್ಚೆ ಮಾಡುವಂತಾಗಬೇಕು.

೭. ಸಾಂಸ್ಕೃತಿಕ ಕಾರ್ಯಕ್ರಮಗಳ ಆಹ್ವಾನಪತ್ರಿಕೆಗಳನ್ನು ಕೊಡಗು ಭಾಷೆಯಲ್ಲಿ ಮುದ್ರಿಸಬೇಕು.

ಇನ್ನು ಕೆಲವರ ಅಭಿಪ್ರಾಯಗಳು ಸ್ವಲ್ಪಮಟ್ಟಿಗೆ ವಿರುದ್ಧ ರೀತಿಯಲ್ಲಿವೆ.

ಕೊಡವರು ಪರಭಾಷಾ ವ್ಯಾಮೋಹ ಬಿಟ್ಟು ದಿನನಿತ್ಯ ಕೊಡಗು ಭಾಷೆಯಲ್ಲೇ ವ್ಯವಹರಿಸಬೇಕು.

ಪಾರಂಪರಿಕವಾಗಿ ಕೊಡವರಿಗೆ ಒಂದೆ ಅನ್ವರ್ಥನಾಮವಿರುವುದು ವಾಡಿಕೆ. ಆದರೆ ಇತ್ತೀಚೆಗೆ ಪ್ರತಿಯೊಬ್ಬರೂ ಎರಡೆರಡು ಅನ್ವರ್ಥನಾಮಗಳನ್ನು ಹೊಂದಿದ್ದು ಮುದ್ದಿಗಾಗಿ ಇಟ್ಟುಕೊಳ್ಳುವ ಅನ್ವರ್ಥನಾಮಕ್ಕೆ ಪಾಶ್ಚಾತ್ಯ ಮಾದರಿಯನ್ನು ಅನುಸರಿಸುತ್ತಾರೆ.

ಉದಾ: ಸನ್ನಿ, ಡಾಲಿ, ಸ್ವೀಟಿ, ಹ್ಯಾರಿ, ಗ್ರೇಸಿ, ರೋಸಿ ಇತ್ಯಾದಿ.

ಈ ಮೇಲೆ ಹೇಳಿದಂತೆ, ಆಧುನೀಕರಣವು ಕೇವಲ ಸಾಮೂಹಿಕ ಮಾಧ್ಯಮಗಳಲ್ಲಿ ನಿರ್ಮಾಣವಾಗುವ ಶಬ್ದ, ವಾಕ್ಯರಚನೆ, ಸ್ವನೋಚ್ಚಾರಣೆಗಳಷ್ಟಕ್ಕೇ ಸೀಮಿತವಾಗಿರದೆ ನಿರ್ದಿಷ್ಟವಾಗಿ ಭಾಷಾ ಬಳಕೆಯ ಸಂದರ್ಭಗಳ ಮಟ್ಟದಲ್ಲಿಯೂ ಭಾಷೆ ಆಧುನೀಕರಣಗೊಳ್ಳಲು ಸಾಧ್ಯ.

ಪರಭಾಷೆಯ ಸಂಪರ್ಕವಿಲ್ಲದೆ ವ್ಯವಹರಿಸುವುದು ಕಷ್ಟಸಾಧ್ಯ. ಆದರೆ ಸ್ವಭಾಷೆಯ ಬಗ್ಗೆ ಹೆಚ್ಚು ಜಾಗೃತರಾಗಿರಬೇಕು. ಬೇರೆ ಭಾಷೆಯ ಶಬ್ದ ಸ್ವೀಕರಣಗಳಿಂದ ಒಂದು ಭಾಷೆ ಅಭಿವೃದ್ಧಿಯಾಗುವುದೇನೋ ನಿಜ. ಆದರೆ ಭಾಷೆ 'ಕ್ರಿಯೋಲೈಜೇಶನ್' ಮಟ್ಟಕ್ಕೆ ಏರಬಾರದು.

---

[ಈ ಲೇಖನಕ್ಕೆ ಬಳಸಿಕೊಂಡ ಸಾಮಗ್ರಿಗಳು ಮುಖ್ಯವಾಗಿ 'ಬ್ರಹ್ಮಗಿರಿ' ಹಾಗೂ 'ಜಮ್ಮ ನಂಗಡ' ಎಂಬ ಕೊಡಗು ಭಾಷಾ ವಾರಪತ್ರಿಕೆಗಳಿಂದಾಗಿವೆ].

# ಪಂಪ ಕವಿ

## (ಒಂದು ಟಿಪ್ಪಣಿ-೧೯೮೯)

ಕೆ. ವೆಂ. ರಾಜಗೋಪಾಲ

ಪಂಪ ಕವಿಯನ್ನು ಕುರಿತ ಶೋಧವಿನ್ನೂ ಬೆಳೆಯುತ್ತಲೇ ಬಂದಿರುವುದರಿಂದ ಈ ಟಿಪ್ಪಣಿಯನ್ನು ಗುರುತಿಸಬೇಕಾಗಿದೆ— ಈತನ ಸುಪ್ರಸಿದ್ಧ ಕೃತಿಯಾದ 'ಆದಿಪುರಾಣಂ'ದ ಕೊನೆಗೆ ಬರುವ ಪ್ರಾರ್ಥನೆಯ ಭಾಗದಿಂದ ಕೆಲವು ವಿಚಾರಗಳನ್ನು ಇಲ್ಲಿ ನಮೂದಿಸಲು ಮತ್ತು ಅದರ ಆಧಾರದಿಂದ ಜೈನ ಪಾರಿಭಾಷಿಕ ಕಲ್ಪನೆಗಳಲ್ಲಿ ವಿಶೇಷತೆಯನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ—

೧. ತೀರ್ಥಂಕರರ ಪ್ರತಿಮೆಗಳ ರಚನೆಯಲ್ಲಿ 'ಪಂಚವರ್ಣಗಳು' ಮುಖ್ಯವಾಗಿವೆ.

೨. ಪಂಪಕವಿಯು ವಿಶೇಷವಾಗಿ ಪ್ರಾರ್ಥಿಸುವ 'ಮಾಣಿಕ್ಯಜಿನೇಶಂ'— ಎಂಬ ವಿಷಯದಲ್ಲಿ ಪಂಪನ ಬಗ್ಗೆ ಇದುವರೆಗೂ ಬಿಟ್ಟಿರಬಹುದಾದ ಒಂದು ಹೊಸ ವಿಚಾರವನ್ನು ಮಂಡಿಸಲು ಪ್ರಯತ್ನಿಸಲಾಗಿದೆ.

ಭೂಮಿಕೆ: ಪಂಪನ ಹೆಸರನ್ನು 'ಪದ್ಮಪ' ಎಂದು ಗುರುತಿಸಿದವರು ದಿ|| ಮುಳಿಯ ತಿಮ್ಮಪ್ಪಯ್ಯನವರು. ಅವರ 'ನಾಡೋಜ ಪಂಪ' ಎಂಬ ಗ್ರಂಥವು ಇಂದಿಗೂ ಒಂದು ಅದ್ವಿತೀಯ ಕೃತಿಯಾಗಿರುವುದಲ್ಲದೆ— ಒಂದು ಬಗೆಯ ಅಧ್ಯಯನದ ಪದ್ಧತಿಯನ್ನೂ ಗೊತ್ತುಮಾಡಿದಂತಾಗಿದೆ. ಇದರಲ್ಲಿ ಪಂಪನ ತಂದೆಯ ಹೆಸರನ್ನು ಭೀಮಪ ಇರಬಹುದೆಂಬ ಊಹೆಯನ್ನೂ ಮುಂದಿಡಲಾಗಿತ್ತು. ಈಗ್ಗೆ ಕೆಲವು ವರ್ಷಗಳ ಹಿಂದೆ ಆಂಧ್ರ ಪ್ರದೇಶದ ಕರೀಂ ಜಿಲ್ಲೆಗೆ ಸೇರಿದ ಗಂಗಾಧರಂ ಎಂಬ ಸ್ಥಳದಲ್ಲಿ ದೊರಕಿದ ಕನ್ನಡ-ತೆಲುಗು-ಸಂಸ್ಕೃತ ಭಾಷೆಗಳಿಗೆ ಸೇರಿದ ಜಿನವಲ್ಲಭನ ಶಾಸನವು ಪಂಪನ ಬದುಕಿನ ಮೇಲೆ ಎಂದಿಲ್ಲದ ಬೆಳಕು ಚೆಲ್ಲಿದುದಲ್ಲದೆ ಒಂದು ವಿಶೇಷ ಸಾಂದರ್ಭಿಕ ಅಧ್ಯಯನಕ್ಕೂ ಅವಕಾಶವಾಯಿತು.

ಈ ಶಾಸನದ ಮೊದಲ ಲೇಖನವು 'ಭಾರತಿ-೧೯೬೭ ಮಾರ್ಚ್'ಯಲ್ಲಿ ಡಾ|| ನೇಲಟೂರಿ ವೇಂಕಟರಮಣಯ್ಯ-ಎಂಬುವರಿಂದ ಪ್ರಕಟವಾಗಿದೆ. 'ಇದಿ ಕರ್ಣಾಟಕ ಕವಿರತ್ನತ್ರಯ ಮುಂದಾಡ್ಯು ಡ್ಯೆನ ಪಂಪನಿ ತಮ್ಮುಡಗು ಜಿನವಲ್ಲಭುನಿ ಪ್ರಶಸ್ತಿ. ಇಂದು ಆತನಿ ವಂಶಕ್ರಮಮುನು, ಗುಣಸಂಪತ್ತಿಯು, ವೈದುಷ್ಯ ಮುನು, ವದಾನ್ಯತಯುನು, ಮತಾಭಿನಿವೇಶಮುನು, ಘನಕಾರ್ಯಮುಲುನು, ವರ್ಣಿಂಚಬಡಿನವಿ.'— ಎಂದು ಮುಂದೆ ಕ್ರಮವಾದ ಅಧ್ಯಯನದ ವಿವರಗಳಿವೆ. ೧. ಇದರ ಲಿಪಿಯು—"ಕ್ರಿ.ಶ. ಒಂಬತ್ತು-ಹತ್ತನೆ ಶತಾಬ್ದಿಯಲ್ಲಿ ತೆಲಂಗಾಣದಲ್ಲಿ ವಾಡಿಕೆಯಲ್ಲಿದ್ದ 'ತೆಲುಗು ಕನ್ನಡ ಲಿಪಿ'. ಅಕ್ಷರವು ಇಂಚಿಗೆ ದೊಡ್ಡದಾಗಿದ್ದು ಎರಡನೆ ಅರಿಕೇಸರಿ ವೇಮುಲವಾಡದ ಶಾಸನದ ಅಕ್ಷರಗಳನ್ನು ಹೋಲುವಂತಿವೆ. ೨. ಭಾಷೆ-ಈ ಶಾಸನದಲ್ಲಿ ಸಂಸ್ಕೃತ-ಕರ್ಣಾಟಾಂಧ್ರ ಭಾಷೆಗಳು ಮೂರೂ ಬಳಕೆಯಾಗಿದೆ. ಇದು ಗದ್ಯ ಪದ್ಯಾತ್ಮಕವಾಗಿದೆ. 'ಓಂ ನಮಃ ಸಿದ್ಧೇಭ್ಯಃ" ಎಂದು ಸಂಸ್ಕೃತ ವಾಕ್ಯದಿಂದ ಪ್ರಾರಂಭವಾಗುತ್ತದೆ. ತರುವಾಯ ಒಂದು ದೀರ್ಘ ಕನ್ನಡ ಗದ್ಯ, ನಂತರ ಮೂರು ಸಂಸ್ಕೃತ ವೃತ್ತಗಳು (ಎರಡು ಶಾರ್ದೂಲವಿಕ್ರೀಡಿತ, ಒಂದು ಪೃಥ್ವೀ) ಅಲ್ಲಿಂದ ಮುಂದೆ ಕನ್ನಡ ವೃತ್ತಗಳು ಆರು (ಚಂಪಕಮಾಲಾ ನಾಲ್ಕು, ಮತ್ತೇಭ ವಿಕ್ರೀಡಿತ ಒಂದು, ತರಳ ಒಂದು) ಹೀಗೆ ನಂತರ ತೆಲುಗು ಪದ್ಯಗಳು (ಕಂದಗಳು) ಮೂರು, ಕೊನೆಗೆ ಒಂದು ಸಣ್ಣ ಕನ್ನಡ ವಚನ ಕೂಡ ಇದೆ.

ಈ ಶಾಸನದ ಒಂದು ಮುಖ್ಯ ಅಂಶವಾಗಿ— ೧. ....'ನಿಡುಂಗೊಂಡ ಅಭಿಮಾನ ಚನ್ದ್ರನ ಮರ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೇರಿಯ ಜೋಯಿಸ ಸಿಂಘನ ಮರ್ಮಂ'— ಎಂಬುದರಲ್ಲಿ 'ಭೀಮಪ್ಪಯ್ಯ' ಎಂಬುದಾಗುತ್ತದೆ. (ಇದು ಶಾಸನದ ಮೊದಲ ಸಾಲು.)

೨. ಈ ವೃಷಭಗಿರಿಯೆಂಬನಾದಿ ಸಂಸಿದ್ಧ ತೀರ್ಥದ ದಕ್ಷಿಣದಿಶಾಭಾಗ
ದೀ ಸಿದ್ಧಶಿಲೆಯೊಳ್ತಮ್ಮ ಕುಲದೈವ ಮಾದ್ಯನ್ತ ಜಿನಬಿಂಬಂಗಳುಮಂ
ಚಕ್ರೇಶ್ವರಿಯುಮಂ ಪೆರವುಂ ಜಿನಪ್ರತಿಮೆಗಳುಮಂ ತ್ರಿಭುವನ ತಿಲಕ
ಮೆಂಬ ಬಸದಿಯುಮಂ ಕವಿತಾಗುಣಾರ್ಣವಮೆಂಬ ಕೆರೆಯುಮಂ
ಮದನವಿಳಾಸನೆಂಬ ಬನಮುಮಂ ಮಾಡಿಸಿದಂ |

ಹೀಗೆ ಮೊದಲ ಮೂರು ಸಾಲುಗಳಲ್ಲಿ ಕನ್ನಡದಲ್ಲಿ ವಂಶಪರಂಪರೆಯ ಒಕ್ಕಣೆ ಬರುತ್ತದೆ. ಅಲ್ಲದೆ ಈ ಹನ್ನೊಂದು ಸಾಲಿನ ಶಾಸನವು ಪಂಪನನ್ನು ಕುರಿತ ಶೋಧನೆಯಲ್ಲಿ ಒಂದು ಐತಿಹಾಸಿಕ ಘಟ್ಟವಾಗಿ ಪರಿಣಮಿಸಿತು (ಆಧಾರ : ಭಾರತಿ —ಮಾರ್ಚ್ ೧೯೬೭).

"ವಿಕ್ರಮಾರ್ಜುನ ವಿಜಯ ಮತ್ತು ಗಂಗಾಧರಂ ಶಾಸನಗಳನ್ನು ನೋಡಿದ ಮೇಲೆ ಪಂಪನ ತಂದೆಗೆ 'ಅಭಿರಾಮದೇವರಾಯ', 'ಭೀಮ' ಎಂಬ ಎರಡು ಹೆಸರು

ಗಳಿದ್ದಂತೆ ತಿಳಿಯಬೇಕಾಗುತ್ತದೆ. ಜೈನರಲ್ಲಿ ಒಬ್ಬ ವ್ಯಕ್ತಿಗೆ ಎರಡು ಹೆಸರುಗಳ ರೂಢಿ ಅಪರೂಪವೇನಲ್ಲ. ದೇವರಾಯ, ದೇವೇಂದ್ರ—ಎಂಬ ಎರಡು ಹೆಸರು ಗಳಲ್ಲಿ ಕಂಡುಬರುವ ಅರ್ಥಸಾಮ್ಯವನ್ನೂ ಪಂಪನಿಗೆ ಗುರುದೇವೇಂದ್ರ ಮುನಿಗಳ ಮೇಲೆ ಇರುವ ಅಪಾರ ಗೌರವ ಅಪ್ತತೆಗಳನ್ನೂ ಗಮನಿಸಿ ಪಂಪನ ತಂದೆ ಅಭಿರಾಮದೇವರಾಯನೇ ದೇವೇಂದ್ರ ಮುನಿ, ಗೃಹಸ್ಥ ಜೀವನದಲ್ಲಿಯ ಭೀಮ ಮುನಿಯಾದಾಗ ದೇವೇಂದ್ರನಾಗಿದ್ದಾನೆ. ಇತ್ಯಾದಿ ಊಹೆಗಳನ್ನು ಸೀತಾರಾಮ ಜಾಗೀರ್‌ದಾರ್ ಅವರು ಮುಂಡಿಸಿದ್ದಾರೆ. ಹೆಚ್ಚಿನ ಆಧಾರಗಳು ಸಿಕ್ಕುವವರೆಗೆ ಈ ವಿಚಾರದಲ್ಲಿ ನಾವು ಏನನ್ನೂ ಹೇಳುವಂತಿಲ್ಲ" ಎಂದು ಡಾ|| ಬಿ. ರಾಮಚಂದ್ರ ರಾವ್ ಗುರುತಿಸಿದ್ದಾರೆ.

ಪಂಪನ ಆದಿಪುರಾಣವನ್ನು ಪರೀಕ್ಷಿಸಿದರೆ ಅದಕ್ಕೆ ಪ್ರಧಾನ ಆಕರವಾದ ಪೂರ್ವ ಪುರಾಣವು ತನ್ನ ದಟ್ಟವಾದ ಪ್ರಭಾವವನ್ನು ಅದರ ಮೇಲೆ ಬೀರಿದೆ, ಎಂಬುದು ಸ್ಪಷ್ಟವಾಗಿದೆ ಎಂದೂ 'ಇತ್ತೀಚೆಗೆ ನಡೆದ ಅಧ್ಯಯನದಲ್ಲಿ ಆಕರದೊಡನೆ ಆದಿಪುರಾಣದ ತೌಲನಿಕ ಸಮೀಕ್ಷೆ ಹೆಚ್ಚಿನ ವಿವರದಲ್ಲಿ ನಡೆದಿರುವುದು ಸ್ತುತ್ಯ ವಾದರೂ ಎಲ್ಲೆಡೆಗೆ ಆಕರವನ್ನು ಬಳಸುವುದರಲ್ಲಿ ಪಂಪನು ಕಾವ್ಯಧರ್ಮವನ್ನು ಮರೆದಿದ್ದಾನೆ-ಎಂಬ ವಿವೇಚನೆ ಸತ್ಯಕ್ಕೆ ದೂರವಾಗಿದೆ ಇತ್ಯಾದಿ ವಿಚಾರಗಳನ್ನೂ ಕಾಣುತ್ತೇವೆ. ಡಾ|| ರಂ. ಶ್ರೀ. ಮುಗಳಿಯವರು, ಮುಂದುವರೆದು ತಮ್ಮ ಲೇಖನದ ಕೊನೆಗೆ 'ಪಂಪನ ಈ ಸಮಗ್ರ ವಿವೇಚನೆಯಿಂದ ಅವನೆರಡೂ ಕಾವ್ಯ ಗಳು ಅವನ ಸಮನ್ವಿತ ಸಂಸ್ಕೃತಿಯ ಮತ್ತು ಸರ್ವಂಕಷ ಪ್ರತಿಭೆಯ ಫಲವಾಗಿ ದೊರೆತ ಎರಡು ಮಹಾಕೃತಿಗಳೆಂದು ತಿಳಿಯಲು ಅಡ್ಡಿಯಿಲ್ಲ. ಅವಕ್ಕಿರುವ ಇತಿ ಮಿತಿಗಳಿಂದ ಉಂಟಾದ ಅಸಾಂಗತ್ಯ-ಆಭಾಸಗಳಿಂದ ಅವುಗಳ ಹಿರಿಮೆಗೆ ಬಾಧೆ ಯಿಲ್ಲ. ಆದರೆ ಆ ಕೊರತೆಗಳು ಇರದಿದ್ದರೆ, ಕವಿ ಅವನ್ನು ತೊಡೆದುಹಾಕಿದ್ದರೆ ಎರಡೂ ಕಾವ್ಯಗಳು ಮಹತ್ತರ ಕೃತಿಗಳಾಗುತ್ತಿದ್ದವು. ಅಂಥ ಮಹತ್ತರ, ಮಹತ್ತಮ ಕೃತಿಯನ್ನೂ ನೀಡಬಲ್ಲ ಶಕ್ತಿಯುಳ್ಳ ಪಂಪನು ಅದನ್ನು ಕನ್ನಡ ಕಾವ್ಯ ಪ್ರಪಂಚಕ್ಕೆ ಕೊಡಲಿಲ್ಲ ಎಂಬ ಕೊರಗು ಮಾತ್ರ ಉಳಿಯುತ್ತದೆ. ಅವನು ನಮಗೆ ಕೊಟ್ಟಿರುವಷ್ಟು ಕೂಡ 'ತದಕ್ಷಯ ನಿಧಿ' ಅದಕ್ಕೆ 'ಕ್ಷಯಂ ಅಣಂ ಇಲ್ಲ' ಎಂದಿ ದ್ದಾರೆ.—ಇಂತಹ ನಿರ್ಣಯಗಳಿಂದಲೂ ಪಂಪನ ಬಗ್ಗೆ ಆಗಿರುವ ಪರಿಶೀಲನೆಯು ಸಾಲದೆನ್ನಿಸಬಹುದಾಗಿದೆ. ಆದುದರಿಂದ ಈ ಮುಂದಿನ ಭಾಗದಲ್ಲಿ ಪಂಪನ ಹೆಸರು ಮತ್ತು ದೈವಸಂಬಂಧವನ್ನು ಕುರಿತು ಒಂದು ಟಿಪ್ಪಣಿಯನ್ನು ಮುಂದಿಡಲಾಗಿದೆ—

೧. ಪಂಪನನ್ನು ಕುರಿತು ದಿ|| ಮುಳಿಯ ತಿಮ್ಮಪ್ಪಯ್ಯನವರು "ನಮ್ಮ ಕವಿಯ ಅಂಕಿತನಾಮವು 'ಪದ್ಮಪ' (ಪದ್ಮ+ಅಪ್ಪ) ಎಂದು ಇದ್ದಿರಬೇಕು. ಅದು ಮನೆಯವರ ಪ್ರೇಮದ ಆಡುಮಾತಿನಲ್ಲಿ 'ಪಂಪ' ಎಂದು ಮತ್ತೆ ಮಾರ್ಪಟ್ಟಿರ ಬೇಕು. 'ಗಣಪ' ಎಂಬುದು 'ಗಂಪ' ಅಲ್ಲವೆ 'ಕಂಪ' ಎಂದಾದಂತೆ ಈ ಪದವು,

ಪದ್ಮಪ-ಪಮ್ಮಪ-ಪಮ್ಪ ಈ ದಾರಿವಿಡಿದು 'ಪಂಪ' ಎಂದು ನೆಲೆಗೊಂಡಿರಬೇಕು" ಎಂದು 'ಪಂಪಮಹಾಕವಿ, ಲಕ್ಷ್ಮೇಶ್ವರ ೧೯೫೫' ಎಂಬ ಗ್ರಂಥದಲ್ಲಿನ ಮುಳಿಯ ತಿಮ್ಮಪ್ಪಯ್ಯನವರ ಲೇಖನವು ಹೇಳುತ್ತದೆ. ಇದು ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಸಮಂಜಸವಾದುದಲ್ಲ. ಏಕೆಂದರೆ ಈ ರೂಢಿಯ ಪ್ರಯೋಗಗಳಿಗೆ ಆಧಾರಗಳು ಸಮಕಾಲಿಕ ಅಂದರೆ ಪಂಪನ ಕಾಲದವಾಗಿರಲಾರವು. ಈಗಿನ ರೂಢಿಯ ಪ್ರಯೋಗಗಳನ್ನು ೧೦ನೇ ಶತಮಾನಕ್ಕೆ ತಳ್ಳುವುದು ಸರಿಯಾಗಿರಲಾರದು.

೨. ಮತ್ತೊಮ್ಮೆ ಡಾ|| ಬಿ. ರಾಮಚಂದ್ರರಾಯರ ವಿಚಾರವನ್ನು ಗಮನಿಸಬಹುದು—"ಈಚೆಗೆ ದೊರೆತ ಜಿನವಲ್ಲಭನ ಗಂಗಾಧರ ಶಾಸನದಿಂದ ಈ ಶಾಸನದ ವೃಷಭಾದ್ರಿ ಇರುವ ಗ್ರಾಮದ ಹೆಸರು 'ಕುರಿಕ್ಯಾಲ'ವೆಂಬುದಾಗಿ ಈಗ ತಿಳಿದುಬಂದಿದೆ. ('ಭಾರತಿ'ಯ ಲೇಖನ ೧೯೬೭). ಪಂಪನಿಗೆ ಜಿನವಲ್ಲಭನೆಂಬ ತಮ್ಮನೊಬ್ಬನಿದ್ದಂತೆಯೂ ಪಂಪನ ಮಾತಾಪಿತೃಗಳು ಅಬ್ಬಣಬ್ಬೆ (ವಬ್ಬಣಬ್ಬೆ) ಮತ್ತು ಭೀಮಪಯ್ಯರೆಂದೂ ತಿಳಿದುಬಂದಿದೆ. ಅಲ್ಲದೆ ಪಂಪನ ತಾಯಿ ಅಬ್ಬಣಬ್ಬೆ ಬೆಳ್ವೊಲದಣ್ಣಿಗೆರೆಯ ಜೋಯಿಸ ಸಿಂಘನ ಮೊಮ್ಮಗಳೆಂದೂ ಪಂಪನ ತಂದೆ ಭೀಮಪಯ್ಯನು ನಿಡುಂಗೊಂಡೆಯ ಅಭಿಮಾನಚಂದ್ರನ ಮೊಮ್ಮಗನೆಂದೂ ಆ ಶಾಸನದಲ್ಲಿ ಹೇಳಿದೆ. ಗಂಗಾಧರಂ ಶಾಸನ ಮಾಧವ ಸೋಮಯಾಜಿಯ ಹೆಸರನ್ನೂ ಅಭಿಮಾನಚಂದ್ರನ ಮಗನಾದ ಕೊಮರಯ್ಯನ ಹೆಸರನ್ನೂ ಹೇಳುವುದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿತವಾದ 'ವಿಕ್ರಮಾರ್ಜುನವಿಜಯ'ದ ೧೪ನೆಯ ಆಶ್ವಾಸ, ೪೭ನೇ ಪದ್ಯದ ಅಂತ್ಯ ಪಾದದಲ್ಲಿ....ಅಜ್ಞಾನ ತಮೋ | ಸಿ | ಕರಸಭಿರಾಮದೇವರಾಯಂ ತನಯಂ || ಎಂಬ ಪಾಠವನ್ನು 'ಕ', 'ಖ' ಪ್ರತಿಗಳ ಪರಂಪರೆಯನ್ನಾಧರಿಸಿ ಕೊಡಲಾಗಿದೆ. ಇದನ್ನಾಧರಿಸಿ ದಿ|| ಮುಳಿಯ ತಿಮ್ಮಪ್ಪಯ್ಯನವರು 'ಭೀಮ' ಎಂದೆ ಅವನ (ಕೊಮರಯ್ಯನ ಮಗ, ಪಂಪನ ತಂದೆ) ಹೆಸರಾಗಿದ್ದಿರಬಹುದೆ? (ನಾಡೋಜ ಪಂಪ, ಪು. ೭೩) ಎಂದು ಊಹಿಸಿದ್ದರು. ಗಂಗಾಧರಂ ಶಾಸನ ಬೆಳಕಿಗೆ ಬಂದಮೇಲೆ ಅವರ ಊಹೆ ಸತ್ಯವಾಗಿದೆ. (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.)

ಆದರೆ ಈ ವಿದ್ವಾಂಸರು ಬಿಟ್ಟಿರುವ 'ಪಂಪಾರ್ಯಾನುಜ' ಎಂಬುದರಲ್ಲಿರುವ 'ಪಂಪಾರ್ಯ' ಎಂಬುದನ್ನೂ 'ಭೀಮಪಯ್ಯನ' ಎಂಬುದರಲ್ಲಿನ ಅಯ್ಯ=ಆರ್ಯ ಪ್ರಯೋಗಗಳ ಹಳತನವನ್ನೂ ಗಮನಿಸಬೇಕಾಗುತ್ತದೆ. ಅಲ್ಲದೆ ಕೊಮರಯ್ಯ ಎಂಬ ಪಂಪನ ಪ್ರಯೋಗವನ್ನು ಗಮನಿಸಿದಲ್ಲಿ 'ಪಂಪ'ನನ್ನು 'ಪದ್ಮಪ' ಎಂಬುದರಿಂದ ಗುರುತಿಸುವ ತೊಡಕು ಕೂಡ ಅರಿವಾದೀತು.

ಆದರೆ ಪಂಪ ಮತ್ತು ಪಂಪಾರ್ಯ-ಇವುಗಳಲ್ಲಿ 'ಪಂಪ' ಎಂಬುದೇ ಹುಟ್ಟು ಹೆಸರಿರಬೇಕೆಂಬ ವಾದವೂ ತಲೆದೋರುತ್ತಿದೆ. ಇದೇ ಶಾಸನದಲ್ಲಿ 'ಚದುರ ಮಯ್ಮೆಯ ಸಕ್ಕವಿತ್ವದ ಸನ್ದ ಪಂಪನ ತಮ್ಮನೊ | ರ್ವ್ವದೆ' ಎಂಬ ಪ್ರಯೋಗವೂ

ಕಾಣಿಸುತ್ತಿದೆ. ಆದರೂ ಈ ಹೆಸರು 'ಪಂಪ' ಎಂಬುದಕ್ಕೆ 'ಸಂಗ್ರಹಿತ-ರೂಢನಾಮ' ಎಂದೇ ಗುರುತಿಸುವುದು ಮುಖ್ಯವಾಗುತ್ತದೆ. ಇದಕ್ಕೆ ಪಂಪನ ಪ್ರಸಿದ್ಧಿಯೇ ಅಲ್ಲದೆ ಅರಿಕೇಸರಿ IIಯ ಆಶ್ರಯ-ಸ್ನೇಹಗಳೂ ಕಾರಣವಾಗಿರಲು ಸಾಧ್ಯ. ಹೀಗೆ ರಾಷ್ಟ್ರಕೂಟ ರಾಜರ ಹೆಸರುಗಳಲ್ಲಿಯೂ ಇಂತಹ ಉದಾ. ಗೋವಿಂದ-ಗೊಜ್ಜಿಗ, ಮೊದಲಾದ ಉದಾಹರಣೆಗಳು ಸಿಕ್ಕುತ್ತಿವೆಯಷ್ಟೆ. ಆದುದರಿಂದ ಅಂದಿನ ಕಾಲಧರ್ಮದಲ್ಲಿ 'ಪಂಪ'ನ ಹುಟ್ಟು ಹೆಸರು ಅಡಗಿಹೋದಂತಾಗಿದೆ. (ಇದಕ್ಕೆ ಇನ್ನೂ ಹೆಚ್ಚು ಅರ್ಥಗಳು ದೊರಕುವವರೆಗೂ 'ಪಂಪ'ನ ಹೆಸರು ಹುಟ್ಟುಹೆಸರಿರಲಾರದು).

* * * *

ಮೇಲೆ ಸೂಚಿತವಾಗುವ ಅಸಂಗತ ಕ್ರಮಗಳಿಗಿಂತಲೂ ಗಂಭೀರವಾದ ಮತ್ತೊಂದು ಸುಳುಹು ಪಂಪಕವಿಯ ಆದಿಪುರಾಣಂ-ಕೃತಿಯ ಷೋಡಶಾಸ್ವಾಸಂ ಭಾಗದಲ್ಲಿರುವಂತಿದೆ.

ಶ್ರೀ ರಮಣೀ ನಿಳಯ ಜಿನಾ-
ಗಾರಂಗಳ್ ತನ್ನ ಜಸದವೊಲ್ ವಸುಧೆಗಳಂ |
ಕಾರಂಗಳಾಗ ಪೂರ್ಣ್ಣಮ-
ನೋರಥನಾದಂ ಸರಸ್ವತೀ ಮಣಿಹಾರಂ || ೧ ||

ವ|| ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳಾದಿ ಭಟ್ಟಾರಕರಾದಿಯಾಗಿ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನ ಮಯಂಗಳಂ ಮಾಡಿಸಿ ಮಾಣಿಕ್ಯ ದೇವರೆಂದು ಕೊಂಡಾಡಿ ತತ್ಪೂಜಾಕರಣ ಪುಣ್ಯವಾಸರುಗಳೊಳುಪವಾಸ ನಿರತನಪರಿಮಿತಾಜ್ಯಕ್ಷೀರದಧಿ ನಾಳಿಕೇರ ಸಹಕಾರಪೂಗೀಫಲಪುಂಡ್ರೇಕ್ಷುರಸಂಗಳಿಂದಂ ಗೋಶೀರ್ಷಚಂದನಕರ್ಪೂರಪರಿಮಳಸುರಭಿಗಂಧೋದಕಗಳಿಂದಭಿಷೇಕಂಗೆಯ್ದು-ಇತ್ಯಾದಿ ಕ್ರಮವಾದ ಪೂಜೆಯಲ್ಲಿ 'ದಿವ್ಯಾರ್ಚನೆಯೊಳೆ ಮೆಱೆದಂ ಭಕ್ತಿಯಂ ಚಕ್ರನಾಥಂ || ೨ || ಎಂದೂ '....ರಕ್ತಾಶೋಕ ಬಂಧೂಕಶೋಣಮಣಿಜ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ || ೩ ||

ಎಂದಿರುವುದಲ್ಲದೆ—

ಕಣಿ ರತ್ನತ್ರಿತಯಕ್ಕಿದೇಂ ಪಿರಿದೆನಲ್ ರತ್ನಾಕರಂ ರತ್ನತೋ
ರಣ ರತ್ನಾಸನ ರತ್ನ ವಿಭ್ರಮಣ ರತ್ನಾಶೋಕ ರತ್ನಪ್ರಭಾ-
ಮಣಿ ರತ್ನಾತಪವಾರಣತ್ರಿತಯದಿಂ ತ್ರೈಲೋಕ್ಯ ಸಾಮ್ರಾಜ್ಯಭೂ-
ಷಣ ಮಾಣಿಕ್ಯ ಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ||೪||

ಎಂದು ಪ್ರಾರ್ಥಿಸುತ್ತಾ ಮುಂದುವರಿದು ಪರಿಪೂರ್ಣೋಜ್ವಲ ಚಂದ್ರಬಿಂಬ ರುಚಿಯಿಂ ಚಂದ್ರಪ್ರಭಂ ಪುಷ್ಪದಂ | ತನೆನಲ್ ಗಾರುಡನೀಲಶೋಣಮಣಿ ಹೇಮ

ಚ್ಛಾಯೆಯಿದಿರ್ಪ್ಪಂತಿ | ರ್ವ್ವರೆನಲ್ ಸಾಲ್ದೊಡಮೇಕರೂಪಮೆ ಜಗಕ್ಯಾಶ್ಚರ್ಯ ಮಂ ಪುಟ್ಟಿಸು | ತ್ತಿದೆ ಮಾಣಿಕ್ಯಜಿನೇಂದ್ರ ಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ || ೫ || ಹೀಗೆ 'ಮಾಣಿಕ್ಯದೇವ'ನನ್ನು ಕುರಿತ ಮಂಗಳ ಪದ್ಯಗಳು ೪ ರಿಂದ ೧೦ರ ವರೆಗೆ ೭ ವೃತ್ತಗಳ ರಚನೆಯಿದೆ. ಇವುಗಳಿಂದ ಮಾಣಿಕ್ಯಜಿನೇಂದ್ರ ಬಿಂಬಂ, ಮಾಣಿಕ್ಯದೇವಂ, ಮಾಣಿಕ್ಯ ಭಟ್ಟಾರಕಂ ಎಂಬ ಉದ್ದೇಶಗಳೂ ಕಂಡು ಬಂದು ಇದನ್ನು 'ಮಾಣಿಕ್ಯ ಜಿನಸ್ತವಾವಳಿ' ಎಂದು ಹೆಸರಿಸುವಂತಿದೆ.

ಇದರ ಮುಂದಕ್ಕೆ ೨೪ ತೀರ್ಥಂಕರರನ್ನೂ ನಮಿಸುವ ಸಂಸ್ಕೃತ ಶ್ಲೋಕಗಳು ಬರುತ್ತವೆ. ವೃಷಭನಾಥ, ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ ಮತ್ತು ವರ್ಧಮಾನ (೨೪). ಹೀಗೆ ಕ್ರಮವಾಗಿ ಶ್ಲೋಕಗಳಿವೆ. ಇವರೆಲ್ಲ ವರ್ತಮಾನದ ತೀರ್ಥಂಕರರು ಎಂದು ಶಾಸ್ತ್ರಸಾರಸಮುಚ್ಚಯಂ ಹೇಳು ತ್ತದೆ. ಇದನ್ನು ಪಂಪನು 'ಕವಿತಾಗುಣಾರ್ಣ್ಣವಪ್ರಣೀತಮಪ್ಪಾದಿಪುರಾಣ ದೊಳ್....' ಎಂದೇ ಹೇಳಿರುತ್ತಾನೆ.

—ಇಂಥ ಹೇಳಿಕೆಯಿಂದ ಪಂಪನಿಗೂ 'ಮಾಣಿಕ್ಯ ಜಿನೇಂದ್ರ'ನಿಗೂ ಸಂಬಂಧ ವಿರಲೇಬೇಕೆಂಬ ಊಹೆಯು ತಪ್ಪಾಗಿರಲಾರದು. ಆದರೆ ಈ 'ಮಾಣಿಕ್ಯ ಜಿನೇಂದ್ರ' ಎಂದರೆ ಯಾರಿರಬಹುದು ?

'ಮಾಣಿಕ್ಯ'ವು ನವರತ್ನಗಳಲ್ಲಿ ಒಂದು ಬಗೆಯ ಕೆಂಪು ಹರಳು. (ಎಂದು ಕನ್ನಡ ನಿಘಂಟುಗಳು ಹೇಳುತ್ತವೆ). ಆದುದರಿಂದ ನವರತ್ನಗಳಾದ ೧. ವಜ್ರ, ೨. ವೈಡೂರ್ಯ, ೩. ಗೋಮೇದಿಕ, ೪. ಪುಷ್ಪರಾಗ, ೫. ನೀಲ, ೬. ಮರಕತ, ೭. ಮಾಣಿಕ್ಯ, ೮. ವಿದ್ರುಮ ಮತ್ತು ೯. ಮೌಕ್ತಿಕಂಗಳ ವರ್ಗಕ್ಕೆ ಸೇರಿದ್ದು— ನಾನಾರ್ಥ ಶಬ್ದಾವಳಿ ಮೊದಲಾಗಿ 'ರತ್ನಂ' ಎಂಬುದಕ್ಕೆ 'ಸ್ವಜಾತಿಶ್ರೇಷ್ಠೇಪಿ' ಎಂಬ ವಿವರವು 'ಅಮರಕೋಶದಲ್ಲಿದೆ. ಅಲ್ಲದೆ ಆದರಲ್ಲಿಯೇ 'ವೈಶ್ಯವರ್ಗ'ದಲ್ಲಿ ಪಚ್ಚೆ (೪), ಕೆಂಪು (೩), ಹವಳ (೨), ರತ್ನ (ಮುತ್ತು ಮುಂತಾದ್ದು), ಸೂರ್ಯ ಕಾಂತಮಣಿ (೨), ವೈಡೂರ್ಯ (೨) ಎಂಬ ಹೆಸರುಗಳೂ ಸೇರುತ್ತವೆ. ಕಿಟ್ಟೆಲ್ ತಮ್ಮ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ನವರತ್ನಗಳು— The Nine precious gems ; Vajra, Vaidurya, Gomedhika, Pusyaraga, Nila, Markata, Manikya, Vidruma and Mauktika (Bp. 59, 57, Smd 117). ನವರತ್ನವಾದರೂ ಕನಕಕ್ಕೆ ಅಪೇಕ್ಷಿಸುತ್ತದೆ. ನವರತ್ನವಿದ್ದರೂ ನರರತ್ನ ಬೇಕು. (Prvs.) ಎಂಬ ವಿವರಣೆ ನೀಡಿದ್ದಾರೆ.

—'ಮಾಣಿಕ್ಯ'ವೆಂಬುದು ಕೆಂಪು (ಕನ್ನಡ). ಇದು ಪಂಚವರ್ಣಗಳಲ್ಲಿ ಒಂದು ವರ್ಣ ಕೂಡ, ಇಲ್ಲಿ ವರ್ಣ ಎಂದರೆ ಬಣ್ಣ. ಇದು ತುಂಬಾ ಹಳೆಯ ಅರ್ಥವಿರಬಹುದಾಗಿದೆ.

'ಅಮರಕೋಶ'ದ ಧೀವರ್ಗದಲ್ಲಿ ಈ ವರ್ಣಗಳ ವಿವರ ದೊರಕುತ್ತದೆ—

ಹರಿಣಃ ಪಾಂಡುರಃ ಪಾಂಡುರೀಷತ್ಪಾಂಡುರಸ್ತು ಧೂಸರಃ
ಕೃಷ್ಣೇ ನೀಲಸಿತಶ್ಯಾಮಕಾಲ ಶ್ಯಾಮಲ ಮೇಚಕಾಃ || ೩೦೩ ||

ಇವುಗಳ ವಿವರ ಇನ್ನೂ ಇದೆ. ೧. ಶುಕ್ಲ (೧೬), ೨. ಕೃಷ್ಣ (೭), ೩. ಹಳದಿ (೩), ೪. ಹಸಿರು (೩), ೫. ಕೆಂಪು (೩), ಇವು ಪ್ರಧಾನ ವರ್ಣಗಳಾದರೆ ಮಿಶ್ರವರ್ಣಗಳ ವಿವರವೂ ಇದೆ. ೬. ಅರುಣ (೨), ೭. ಪಾಟಲ (೨), ೮. ದೂಸರ (೨), ೯. ಅರುಣ (೨?), ೧೦. ಪಿಂಗಲ (೬), ೧೧. ಚಿತ್ರ (೬) ಹೀಗೆ ಒಟ್ಟು ೧೬+೭+೩+೩+೩+೨+೨+೨+೬+೬=೫೦ (ಇಂಥ ಮಿಶ್ರಣದ ಬಗೆಗಳು ಇನ್ನೂ ಹೆಚ್ಚು ಸಂಖ್ಯೆಯಲ್ಲಿರಬಹುದು).

ಹೀಗೆ ಮೇಲೆ ಗುರುತಿಸಿರುವಂತೆ ಬಣ್ಣಗಳ ಸಂಖ್ಯೆ ಹೆಚ್ಚಿದ್ದರೂ (Almost modern in the number of colours. Synthetic colours) ಇವುಗಳಲ್ಲೆಲ್ಲಾ ಪಂಚ=೫ ಮಾತ್ರವೇ ಮೂಲ ವರ್ಣಗಳು ಎಂದು ತಿಳಿಯುತ್ತದೆ. ಉಳಿದವು ಇವುಗಳ ಮಿಶ್ರಣಗಳೇ ಆಗಿವೆ. ಆದರೆ ಕೊನೆಯದಾದ 'ಚಿತ್ರ' ಎಂಬುದು ಈ ಐದು ವರ್ಣಗಳ ವಿಶೇಷ ಮಿಶ್ರಣವೆಂಬಂತೆ ತೋರುತ್ತದೆ.

ಅಮರಕೋಶದ ವ್ಯಾಖ್ಯಾನದಲ್ಲಿ (ನಾಮಲಿಂಗಾನುಶಾಸನಂ) Lewis Rice 1927—ಅಮರಕೋಶ; ಇದರಲ್ಲಿ Variegated ಎಂಬ ಪದದ ವಿವರಣೆಯ ಸೂಚನೆಯಿದೆ. ಅಲ್ಲದೆ ಚಿತ್ರ (೫) ಎಂದೂ ಇದೆಯಷ್ಟೆ.

ಒಟ್ಟಿನಲ್ಲಿ ಮಾಣಿಕ್ಯ ಜಿನೇಂದ್ರ ಎಂದರೆ ಕೆಂಪುಬಣ್ಣದ ಪ್ರತಿಕೃತಿಯನ್ನು ಉದ್ದೇಶಿಸಿದ್ದಾಗಿರಬೇಕಷ್ಟೆ. ಈ ಜಿನೇಂದ್ರನು ಯಾರು? ಯಾವ ತೀರ್ಥಂಕರ? ಎಂಬುದಕ್ಕೆ ಉತ್ತರವನ್ನು ಮುಂದಿನ ಭಾಗದಲ್ಲಿ ಕಾಣಬಹುದು.

## ಎರಡು

ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ ಎಂದು ಪಂಪನೇ ಹೇಳಿರುವುದರಿಂದ ಮತ್ತು 'ಚಂದ್ರಬಿಂಬ ರುಚಿಯಿಂ ಚಂದ್ರಪ್ರಭಂ ಪುಷ್ಪದಂತನೆನಲ್ ಗಾರುಡ, ನೀಲ, ಶೋಣಮಣಿ, ಹೇಮಚ್ಛಾಯೆಯಿಂದಿರ್ಪತ್ತಿರ್ವರೆನಲ್ ಸಾಲ್ವೊಡಂ....ಎಂದು ೨೨+೨ ಪ್ರತಿಮೆಗಳ ವರ್ಣಗಳನ್ನು ಹೇಳಿರುವುದನ್ನು ಶಾಸ್ತ್ರಗ್ರಂಥಗಳ ಆಧಾರದಿಂದ ಪರಿಶೀಲಿಸಬಹುದಾಗಿದೆ. (ಇದು ಆದಿಪುರಾಣದ ೧೬ ಆಶ್ವಾಸದಲ್ಲಿದೆ).

ಮಾಣಿಕ್ಯ ಜಿನೇಂದ್ರನು ಪಂಪನ ಆರಾಧ್ಯ ದೈವವಾಗಿರಬೇಕಾಗುತ್ತದೆ. ನಿಜಕ್ಕೂ ಇದಕ್ಕೆಲ್ಲಾ ಜೈನಾಗಮಗಳಲ್ಲಿ ಆಧಾರ ಸಿಗುತ್ತದೆ.

ಶ್ಯಾವೋ ಪಾರ್ಶ್ವ ಸುಪಾರ್ಶ್ವ ದ್ವೈ ನೀಲಾಂಭೌನೇಮಿಸುವ್ರತಾ
ಚಂದ್ರದಸ್ತಾಸಿತೌಸೋಣೌ ಪದ್ಮಪೂಜ್ಯಾ ಪರೇಪರೇ || ೧ ||

ಶೇಷಾಶೋಡಶಹೇವಾ ಭಾಃಕುಮಾರಾಃ ಪಂಚದೀಕ್ಷಕಾಃ
ವಾಸುಪೂಜ್ಯ ಜಿನೋ ಮಲ್ಲಿನೇಮಿಃ ಪಾರ್ಶ್ವೋಥ ಸನ್ಮತಿಃ || ೨ ||

ದಿಗಂಬರ ಜೈನಾಚಾರ್ಯವರ್ಯ ಶ್ರೀಮನ್ಮಾಘನಂದ್ಯಾಚಾರ್ಯರ— ಶಾಸ್ತ್ರಸಾರ ಸಮುಚ್ಚಯಂ (ಕನ್ನಡ ಟೀಕು ಸಹಿತ). ಪ್ರಥಮಾನುಯೋಗ ೧, ೨. ಚತುರ್ವಿಂಶತಿ ತೀರ್ಥಂಕರಾಃ || ೧೭ ||

ಈ ಗ್ರಂಥದ ಪುಟ ೧೧ರಲ್ಲಿ: 'ವರ್ಣ', ೧. ವೃಷಭ, ೨. ಅಜಿತ, ೩. ಶಂಭವ, ೪. ಅಭಿನಂದನ, ೫. ಸುಮತಿ, ೬. ಪುಷ್ಪದಂತ, ೭. ಶ್ರೇಯಾಂಸ, ೮. ವಿಮಲ, ೯. ಅನಂತ, ೧೦. ಧರ್ಮ, ೧೧. ಶಾನ್ತಿ, ೧೨. ಕುಂಥು, ೧೩. ಅರ, ೧೪. ಮಲ್ಲಿ, ೧೫. ನಮಿ, ೧೬. ವರ್ಧಮಾನ—ಈ ೧೬ ಜನರು ಸುವರ್ಣ ವರ್ಣ.

2–೧. ಪದ್ಮಪ್ರಭ, ೨. ವಾಸುಪೂಜ್ಯ—ಇವರಿಬ್ಬರು ಮಾಣಿಕ್ಯ ವರ್ಣ
3–೧. ಸುಪಾರ್ಶ್ವ, ೨. ಪಾರ್ಶ್ವ, ಇವರಿಬ್ಬರು ಪಚ್ಚೆವರ್ಣ
4–೧. ಚಂದ್ರಪ್ರಭ ೨. ಶೀತಲ, ಇವರಿಬ್ಬರು ಧವಲವರ್ಣ
5–೧. ಮುನಿಸುವ್ರತ ೨. ನೇಮಿನಾಥ ಇವರಿಬ್ಬರೂ ಇಂದ್ರನೀಲವರ್ಣ
ಉಳ್ಳವರು=ಒಟ್ಟು ೨೪ ತೀರ್ಥಂಕರರು (ವರ್ತಮಾನದವರು).

ಜೈನಧರ್ಮದಲ್ಲಿ 'ಸಂಖ್ಯೆ'ಗಳಿಗೆ ವಿಶೇಷ ಗೌರವವಿದೆ. ಪಂಚಕಲ್ಯಾಣದಂತೆ ಪಂಚವರ್ಣಗಳಿಗೂ (ಪಂಚಶೀಲಗಳಂತೆ) ಸ್ಥಾನಮಾನವಿದೆ. ಆದುದರಿಂದ ೨೪ ತೀರ್ಥಂಕರರ ಪ್ರತಿಮೆಗಳನ್ನು 'ಪಂಚವರ್ಣ'ಗಳಲ್ಲಿ ಹಂಚಿದಂತೆ ಪ್ರತಿಕೃತಿಗಳನ್ನು ರಚಿಸಿದ್ದಿರಬೇಕು. ಪಂಪನಿಗೆ ಅಥವಾ ಅವನ ವಂಶಕ್ಕೆ ಪದ್ಮಪ್ರಭ ಮತ್ತು ವಾಸುಪೂಜ್ಯರು ಮುಖ್ಯರಾಗಿದ್ದಿರಬಹುದಾದರೂ 'ಪಂಪ'ನಿಗೆ ಹೆಸರಿಡುವಲ್ಲಿ 'ಪದ್ಮಪ್ರಭ' ಎಂಬುದು ಸೂಚಿತವಾಗುತ್ತಿದೆ. ಆದುದರಿಂದ ಈತನ ಹುಟ್ಟುಹೆಸರು 'ಪದ್ಮಪ್ರಭ' ಎಂದಿದ್ದರೆ ಆಶ್ಚರ್ಯಪಡಬೇಕಾದ್ದಿಲ್ಲ—ಆದುದರಿಂದ ತನ್ನ ಹೆಸರಿನ ಹೆಮ್ಮೆಯನ್ನು ಆತನೇ ಹೇಳಿಕೊಂಡಿರುವಂತೆ ಒಂದು ಪದ್ಯವನ್ನು ಇಲ್ಲಿ ನೆನೆಯಬಹುದು.

ಪಂಪಂ ಧಾತ್ರೀವಳಯ ನಿ
ಳಿಂಪಂ ಚತುರಂಗ ಬಳ ಭಯಂಕರಣಂ ನಿ||
ಷ್ಕಂಪಂ ಲಲಿತಾಲಂಕರ
ಣಂ[ಪಂಚಶರೈ]ಕ ರೂಪನಪಗತಪಾಪಂ || ೪೯ ||

(ವಿಕ್ರಮಾರ್ಜುನ ವಿಜಯಂ, ಆಶ್ವಾಸ ೧೪)

ಈ ಪ್ರತಿಕೃತಿಗಳು ಪಂಪನ ಕಾಲಕ್ಕೆ ರಚಿತವಾಗಿದ್ದಿರಬೇಕು. ಇವು ಎಲ್ಲಿವೆ ಎಂಬುದನ್ನು ಇನ್ನೂ ಶೋಧಿಸಬೇಕಾದೆ. ಆದರೆ ಅದಕ್ಕೂ ಮುಂಚೆ ಆಗಿದ್ದಿರಬಹುದಾದ ಮೂಡಬಿದ್ರೆಯ (ದ. ಕನ್ನಡ ಜಿಲ್ಲೆ) 'ಹಳೆಯ ಬಸತಿ'ಯೂ ಒಂದು. ಇಲ್ಲಿಯ ಚಂದ್ರನಾಥನ ಪ್ರತಿಮೆಯ ಭಾಗಕ್ಕಿಂತ ಹಳೆಯದಾದ ಒಂದು ಆಯಾಕಾರದ ಸಣ್ಣ ಕಟ್ಟಡವು ಅದೇ ಪ್ರಾಕಾರದಲ್ಲಿದೆ. (ಪಂಪ ಕೂಡ ಚಂದ್ರಪ್ರಭ ಮತ್ತು ಪುಷ್ಪದಂತರನ್ನು ಮೊದಲು ವಿಶೇಷವಾಗಿ ನೆನೆಯುತ್ತಾನೆ). ಅದರಲ್ಲಿ ೨೪ ತೀರ್ಥಂಕರರ ಮತ್ತು ಆಚೀಚೆ ಕೊನೆಗಳಲ್ಲಿ ಶ್ಯಾಮಯಕ್ಷಿ ಮತ್ತು ಪದ್ಮಾವತೀ ಯಕ್ಷಿಯರ ಲೆಪ್ಪದ ಪ್ರತಿಕೃತಿಗಳಿವೆ. ಇವುಗಳಲ್ಲಿ ಶಾಸ್ತ್ರೋಕ್ತವಾದ ಪಂಚವರ್ಣಗಳ ಬಳಕೆಯಿದೆ.

ಇಲ್ಲಿಯ ಪ್ರತಿಮೆಗಳು ೨೪, ಚಿಕ್ಕವು. ಸುಮಾರು ೨½ ಅಡಿ ಎತ್ತರ×½ ಅಡಿ ಅಗಲವಿರಬಹುದು—ಕ್ರಮವಾದ ರೀತಿಯಲ್ಲೇ ರಚಿಸಲಾಗಿದೆ. ಅದುದರಿಂದ 'ಪಂಚವರ್ಣ'ಗಳು ಅಂದವಾದ ರೀತಿಯಲ್ಲಿ ಹಂಚಿಹೋಗಿವೆ.

೧. ವೃಷಭ, ೨. ಅಜಿತ, ೩. ಶಂಭವ, ೪. ಅಭಿನಂದನ, ೫. ಸುಮತಿ (ಇವು ಸ್ವರ್ಣ-ಹಳದಿ ಬಣ್ಣ), ೬. ಪದ್ಮಪ್ರಭ (ಮಾಣಿಕ್ಯ-ಕೆಂಪುಬಣ್ಣ), ೭. ಸುಪಾರ್ಶ್ವ (ಪಚ್ಚೆ-ಹಸಿರು), ೮. ಚಂದ್ರಪ್ರಭ (ಧವಲ-ಬಿಳಿ), ೯. ಪುಷ್ಪದಂತ (ಸ್ವರ್ಣ-ಹಳದಿ), ೧೦. ಶೀತಲ (ಧವಲ-ಬಿಳಿ), ೧೧. ಶ್ರೇಯಾಂಸ (ಸ್ವರ್ಣ-ಹಳದಿ), ೧೨. ವಾಸುಪೂಜ್ಯ (ಮಾಣಿಕ್ಯ-ಕೆಂಪು), ೧೩. ವಿಮಲ, ೧೪. ಅನಂತ, ೧೫. ಧರ್ಮ, ೧೬. ಶಾಂತಿ, ೧೭. ಕುಂಥು, ೧೮. ಅರ, ೧೯. ಮಲ್ಲಿ (ಸ್ವರ್ಣ-ಹಳದಿ), ೨೦. ಮುನಿಸುವ್ರತ (ಇಂದ್ರನೀಲ-ಕಪ್ಪು), ೨೧. ನಮಿ (ಸ್ವರ್ಣ), ೨೨. ನೇಮಿ (ಇಂದ್ರನೀಲ-ಕಪ್ಪು), ೨೩. ಪಾರ್ಶ್ವ (ಪಚ್ಚೆ-ಹಸಿರು), ೨೪. ವರ್ಧಮಾನ (ಸ್ವರ್ಣ-ಹಳದಿ).

| ಸ್ವರ್ಣ-ಹಳದಿ | ಮಾಣಿಕ್ಯ-ಕೆಂಪು | ಪಚ್ಚೆ-ಹಸಿರು | ಧವಲ-ಬಿಳಿ | ಸ್ವರ್ಣ-ಹಳದಿ |
|---|---|---|---|---|
| ೧,೨,೩,೪,೫ | ೬ | ೭ | ೮ | ೯ |
| ಧವಲ-ಬಿಳಿ | ಸ್ವರ್ಣ-ಹಳದಿ | ಮಾಣಿಕ್ಯ-ಕೆಂಪು | ಸ್ವರ್ಣ-ಹಳದಿ | |
| ೧೦ | ೧೧ | ೧೨ | ೧೩,೧೪,೧೫,೧೬,೧೭,೧೮,೧೯ | |
| ಇಂದ್ರನೀಲ-ಕಪ್ಪು | ಸ್ವರ್ಣ-ಹಳದಿ | ಇಂದ್ರನೀಲ-ಕಪ್ಪು | ಪಚ್ಚೆ-ಹಸಿರು | ಸ್ವರ್ಣ-ಹಳದಿ |
| ೨೦ | ೨೧ | ೨೨ | ೨೩ | ೨೪ |

ಮೇಲಿನ ಕ್ರಮದಲ್ಲಿ ತೀರ್ಥಂಕರರ ಪ್ರತಿಕೃತಿಗಳು ('ಸ್ಟಕ್ಕೋ'ಗಳು) ಇದ್ದು ಎರಡೂ ಕೊನೆಗಳಲ್ಲಿ ಒಂದೆಡೆ ಶ್ಯಾಮಯಕ್ಷಿ (ಪಂಚಮಿಶ್ರ-ಚಿತ್ರ), ಮತ್ತೊಂದೆಡೆ ಪದ್ಮಾವತಿ ಯಕ್ಷಿ (ಚಿತ್ರ) ವರ್ಣಗಳಲ್ಲಿರುವುದು ಶಾಸ್ತ್ರಸಮ್ಮತವಾದುದಾಗಿವೆ.

ಮೂಡಬಿದ್ರೆ (ದ.ಕ.)ಯ ಈ ಬಸದಿಯ ಇಂದ್ರರು ಸಿಂಹಸೇನೇಂದ್ರ ಎಂಬು ವರು. ಇವರು ಜೈನಶಿಲ್ಪ ಪದ್ಧತಿಯನ್ನು ಕುರಿತ ಶ್ಲೋಕಗಳನ್ನು ಹೇಳುತ್ತಾರೆ—

ದ್ವೌ ಕುಂದೇಂದು ತುಷಾರಹಾರಧವಳೌ ದ್ವಾವೀಂದ್ರ ನೀಲಪ್ರಭಾ |
ದ್ವೌ ಬಂಧೂಕ ಸಮಪ್ರಭೌ ಶೇಷಾಶೋಡಷಜನ್ಮ ಮೃತ್ಯುರಹಿತೌ ||
ಸಂತಪ್ತ ಹೇಮಪ್ರಭೌ ಶೇಷಜ್ಞಾನವಿವಾದ ಕೋವಿಮುತ್ತಾಂ
ಸಂತೋಷಸಾಗಚ್ಛತಿ ||

(ಇದರೊಡನೆ 'ಯಾಕುಂದೇಂದು ತುಷಾರಹಾರಧವಳಾ' ಎಂದು ಪ್ರಾರಂಭ ವಾಗುವ ಸರಸ್ವತೀ ಪ್ರಾರ್ಥನೆಯನ್ನೂ ನೆನೆಯಬಹುದಾಗಿದೆ).

ಮೇಲಿನ ಎರಡೂ ಸಾಂದರ್ಭಿಕ ವಿವರಣೆಯಿಂದ ೧೬ ತೀರ್ಥಂಕರರಿಗೆ ಹಳದಿ=ಸ್ವರ್ಣ, ಉಳಿದ ೮ರಲ್ಲಿ ೨ ಕೆಂಪು+೨ ಹಸಿರು+೨ ಬಿಳಿ+೨ ಕಪ್ಪು ವರ್ಣ ಗಳ ವಿಭಜನೆಯಿದೆ. ಅಂದರೆ ಈ ವಿಗ್ರಹಗಳನ್ನು ಯಾವ ವಸ್ತುವಿನಿಂದ ನಿರ್ಮಿಸಿ ದರೂ (ವಜ್ರ–ವೈಡೂರ್ಯ ರಚನೆಯಾದರೂ) ಪಂಚವರ್ಣಗಳಷ್ಟೇ ಮುಖ್ಯವಾಗು ತ್ತವೆ. ಅಲ್ಲದೆ ಪದ್ಮಪ್ರಭ ಮತ್ತು ವಾಸುಪೂಜ್ಯರು ಮಾಣಿಕ್ಯ=ಕೆಂಪು ವರ್ಣದವ ರಿರುತ್ತಾರೆ.

ಇದು ಕೇವಲ ಶಿಲ್ಪಿಗಳ ಅಥವಾ ಶಿಲ್ಪ ಪದ್ಧತಿಯ ಆಧಾರವಾಗಿರಲಾರದು. ಏಕೆಂದರೆ ತೀರ್ಥಂಕರರ ಆತ್ಮಗಳು ಸಿದ್ಧ ಶಿಲೆಯನ್ನು ಆಶ್ರಯಿಸುವಲ್ಲಿ ಅವುಗಳ ಪ್ರಭೆಗಳನ್ನು 'ಪಂಚಪ್ರಭೆ'ಗಳೆನ್ನುವಂತೆ ಗುರುತಿಸಲಾಗಿದೆ. ಆದುದರಿಂದ ಇವು ಆಧ್ಯಾತ್ಮಿಕ ಅಥವಾ 'ಮಿಸ್ಟಿಕ್' ಎನ್ನಬಹುದಾದ ಬಗೆಯದಾಗುತ್ತವೆ. ಈ ಹಂತ ದಲ್ಲಿ ಬೇರೆ ಯಾವ ಮತಧರ್ಮವೂ ಹೀಗೆ ಪಂಚವರ್ಣಗಳನ್ನು ಪರಿಗಣಿಸಿದಂತೆ ಕಂಡುಬಂದಿರುವುದಿಲ್ಲ. ಅಲ್ಲದೆ ಇಂಥ ಆಧಾರದಿಂದ ವೈದಿಕ ಮತ್ತು ಬೌದ್ಧ ಧರ್ಮ ಗಳ ಪರಿಶೀಲನೆಯೂ ಸಾಧ್ಯವಾಗುವಂತಿಲ್ಲ.

ತನ್ನನ್ನು 'ವರ್ಣಿಸಿಕೊಳ್ಳುವ ಪಂಪನ ವರ್ಣಪ್ರಜ್ಞೆಗೆ ಆತನ ಒಂದು 'ಕಂದ' ವನ್ನು ಇಲ್ಲಿ ನೆನೆಯಬಹುದು :

ಕದಲೀ ಗರ್ಭಶ್ಯಾಮಂ
ಮೃದು ಕುಟಿಲ ಶಿರೋರುಹಂ ಸರೋರುಹ ವದನಂ |
ಮೃದು ಮಧ್ಯಮತನು ಹಿತಮಿತ-
ಮೃದುವಚನಂ ಲಲಿತ ಮಧುರ ಸುಂದರವೇಷಂ || ೨೯ ||

(ಆದಿಪುರಾಣಂ–೧)

ಇಲ್ಲಿಯಂತೆ ಪಂಪ ಕವಿಗೆ ಆತ್ಮಪ್ರತ್ಯಯವೂ ಸೊಗಸುತ್ತದೆ. 'ಮಾಣಿಕ್ಯ ಜಿನೇಂದ್ರನು ಈತನ ಆಧ್ಯಾತ್ಮಿಕವೂ ಕುಲದೈವವೂ ಆಗಿದ್ದಿರಬೇಕೆಂದು ಖಚಿತ

ವಾದೀತು. ಆದುದರಿಂದ 'ಪಂಪ'ನ ಹುಟ್ಟುಹೆಸರು ತೀರ್ಥಂಕರನಾಗಿದ್ದಿರಬಹುದು. 'ಪದ್ಮಪ್ರಭ' ಎಂದೇ ಇದ್ದಿರಬಹುದು.

ಆದರೂ ಈತನು ತನ್ನ ಹುಟ್ಟು ಹೆಸರಿನ ಗುಟ್ಟನ್ನು ಬಿಟ್ಟುಕೊಡಲಿಲ್ಲ ಎಂಬ ಅಂಶವು ಉಳಿದೇ ಉಳಿಯುತ್ತದೆ. ಡಿ|| ಮುಳಿಯ ತಿಮ್ಮಪ್ಪಯ್ಯನವರ 'ಪದ್ಮಪ' ಎಂಬುದಕ್ಕಿಂತ ಸಾಧುವಾದ ಒಂದು ಹೆಸರನ್ನು ಇಲ್ಲಿ ಗುರುತಿಸಲು ಮಾತ್ರ ಸಾಧ್ಯವಾದಂತಿದೆ.

## ಮೂರು

ಪಂಪನು ಹೇಳುವ 'ಪಂಚರತ್ನಂಗಳು' ಯಾವುದೆಂದು ಗುರುತಿಸುವುದೇನೂ ಸುಲಭವಲ್ಲ. ಏಕೆಂದರೆ ವರ್ಣಗಳ ಸಂಸ್ಕೃತದ ಹೆಸರುಗಳು ಸ್ಪಷ್ಟ ವಿವರಗಳನ್ನು ಪಡೆಯುವುದಿಲ್ಲ-ಎಂಬುದನ್ನು ನಿಘಂಟುಗಳಿಂದ ಪಾಠ ಕಲಿಯಬೇಕಾಗುತ್ತದೆ. ಆದರೆ ಬಿಳಿ-ನೀಲ-ಕೆಂಪು-ಹಳದಿ-ಹಸಿರು ಅಥವಾ ಅಮೃತಶಿಲೆ-ಇಂದ್ರನೀಲ-ಮಾಣಿಕ್ಯ-ಸ್ವರ್ಣ(ಗೋಮೇದಿಕ)-ಪಚ್ಚೆ ಎಂದು ಗುರುತಿಸಬಹುದಾಗಿದೆ. ಇಂತಹ ವಿಗ್ರಹಗಳು ಕಂಡುಬರುತ್ತಿರುವುದೂ ಉಂಟು. ಇವುಗಳಲ್ಲಿ ಕೂಡ ವರ್ಣಗಳಷ್ಟೇ ಮುಖ್ಯವಾಗಿರುವಂತೆ ತೋರುತ್ತದೆ. ಏಕೆಂದರೆ ಅಮೃತಶಿಲೆ, ಕರಿಯಶಿಲೆ, ಸ್ವರ್ಣದ ಮುಲಾಮಿನ ಪ್ರತಿಮೆ, ಮಾಣಿಕ್ಯ ಮತ್ತು ಪಚ್ಚೆಗಳ ಪ್ರತಿಮೆಗಳೂ ಕಂಡು ಬರುತ್ತಿವೆ. ಮೂಡಬಿದರೆಯಲ್ಲಿ ಇವನ್ನು ಕಾಣಬಹುದು. ಶ್ರವಣಬೆಳಗೊಳದ ಮಠದಲ್ಲಿಯೂ ಕಾಣಬಹುದು. ಅಲ್ಲದೆ ಮೂಡಬಿದರೆಯ ಹಳೆಯ ಬಸ್ತಿಯಲ್ಲಿ 'ಸ್ಟಕ್ಕೋ' ಪ್ರತಿಮೆಗಳು ಲೆಪ್ಪದಿಂದ ರಚಿತವಾಗಿ ಪಂಚ ವರ್ಣಗಳನ್ನು ಪಡೆದಿರುವುದನ್ನು ಕಾಣಬಹುದು. ಇವುಗಳಲ್ಲಿ ಪಂಚ ವರ್ಣಗಳನ್ನು ಲೇಪಿಸಲಾಗಿದೆಯಷ್ಟೆ!

ಹೀಗೆಯೇ ಜೈನೇತರ ಬಳಕೆಗಳೂ ಇರಬಹುದು. ವೈದಿಕವಾಗಲಿ, ಬೌದ್ಧವಾಗಲಿ ವರ್ಣಗಳನ್ನು ಅವುಗಳ ತೀಕ್ಷ್ಣ 'ಪ್ರಭೆ'ಗಳಿಗಾಗಿಯೇ ಮೆಚ್ಚಿಕೊಂಡು 'ಅಮೂಲ್ಯ'ಗಳೆನ್ನುವಂತೆ ಪರಿಗಣಿಸಿರಬಹುದಾಗಿದೆ. ಆದುದರಿಂದ ಅವು ದೈವ ರೂಪಗಳಲ್ಲೂ ಆಭರಣಗಳಲ್ಲೂ (ಐಶ್ವರ್ಯವಂತಿಕೆಯ ಗುರುತು ಆಗಿವೆಯಷ್ಟೆ) ಮಾಂಗಲ್ಯದಂಥ 'ಸಾಧನ'ದಲ್ಲಿಯೂ ಕಂಡುಬರುತ್ತಿವೆ. ಇವುಗಳಿಂದ ವೈಭವದ ಗುರುತಾಗುವುದಾದರೂ ಮೂಲದ್ರವ್ಯದ ಮರೆಮಾಚುವಿಕೆಯೂ ಸಾಧ್ಯವಾಗಿದೆ.

ಈ ಪಂಚವರ್ಣಗಳು ಎಲ್ಲಾ ಕಲೆಗಳಿಗೂ ಆಧಾರವಾಗಿರುವುದೂ ಪ್ರಸಿದ್ಧಿಯನ್ನು ಪಡೆದಿರುವುದೂ ಇವುಗಳ 'ಪ್ರಭಾ'ಲಕ್ಷಣದಿಂದಲೇ ಎಂದರೆ ತಪ್ಪಾಗಲಾರದು.

ಪಾಶ್ಚಾತ್ಯರಲ್ಲಿ ಕೂಡ ವರ್ಣಗಳು ಮುಖ್ಯವಾಗಿವೆಯಷ್ಟೆ. ಅವರ ಎಡಿಸನ್ ನ್ಯೂಟನ್, ಲೆಸ್ಲೀ ಮುಂತಾದ ವಿಜ್ಞಾನಿಗಳ ಪ್ರಯೋಗಗಳಿಗೂ ಮುಂಚೆ ಸಪ್ತ

ವರ್ಣಗಳ ಖಚಿತವಾದ ಕಲ್ಪನೆಯಿದ್ದಿರಲಾರದು—ಎಂದು ತೋರುತ್ತಿದೆ. ಕಾಮನ ಬಿಲ್ಲಿನ ಬಣ್ಣಗಳನ್ನು ಅವರು ರೈನ್‌ಬೋ ಕಲರ್ಸ್ ಎನ್ನುತ್ತಾರೆಯಷ್ಟೆ. ಅದರ ಊದ-ನೀಲ-ನೀಲಿ-ಹಸಿರು-ಹಳದಿ-ಕಿತ್ತಳೆ-ಕೆಂಪು, ಎಂದು ಸಪ್ತ ವರ್ಣಗಳನ್ನು ಬಿಡಿಸಿ ತೋರಿಸಿದಂತೆ ವರ್ಣ ವಿಭಜನೆಯನ್ನು ಮಾಡತೊಡಗಿದಾಗ ಪ್ರಮುಖ (ಪ್ರೈಮರಿ) ಮತ್ತು ಉಪ (ಸೆಕೆಂಡರಿ) ವರ್ಣಗಳೆಂಬ ವಿಚಾರವು ಕಲಾಪ್ರಪಂಚದಲ್ಲಿ ಬಳಕೆಗೆ ಬಂದಿದೆ. ಇಷ್ಟೇ ಅಲ್ಲದೆ ಕಲಾವಿದರ ಪ್ರಯೋಗಗಳಿಂದ ಮಿಶ್ರಿತ ವರ್ಣಗಳು ಅನೇಕವಾಗಿ ಕಂಡುಬಂದಿವೆ.

ನಮ್ಮ ಅಮರಕೋಶವು (ಸು. ಕ್ರಿ.ಶ. ೩೦೦) ಐವತ್ತು ಬಣ್ಣಗಳನ್ನು ಹೆಸರಿಸಿರುವುದನ್ನು ಗಮನಿಸಬಹುದು. ಅವುಗಳೆಲ್ಲಾ 'ಮಿಶ್ರ' ವರ್ಗಕ್ಕೆ ಸೇರಿದಂತೆ ತೋರುತ್ತಿದೆ. ಇಂಥವು ಪ್ರಯೋಗರಹಿತವಾಗಿ ಕೇವಲ ಕಲ್ಪನೆಯಿಂದ ಬರಲು ಸಾಧ್ಯವಿಲ್ಲ. ಕೊನೆಯಪಕ್ಷ, ಬಣ್ಣಗಳ ಗುರುತು ಪರಿಚಯವಾದರೂ ಅವರಿಗೆ ಆಗಿದ್ದಿರಬೇಕಾಗ– ಆದರೂ ಪಾಶ್ಚಾತ್ಯರಂತೆ ನಾವು ವಿಜ್ಞಾನದ ರೀತಿ ನೀತಿಗಳನ್ನು ಕಾಲಕ್ರಮೇಣ ಕಳೆದುಕೊಂಡವರೆಂದು ಬೇಕಾದರೆ ಹೇಳಿಬಿಡಬಹುದು. ಆದರೂ ನಮ್ಮಲ್ಲಿ 'ಪಂಚವರ್ಣ'ಗಳು ಒಂದು ಪಾರಿಭಾಷಿಕ ಪ್ರಯೋಗವಾಗಿ ಉಳಿದುಕೊಂಡು ಬಂದಿದೆಯಷ್ಟೆ. ಇದರ ಬಳಕೆಯನ್ನು ಪ್ರಯೋಜನವನ್ನು ನಮ್ಮ ಶಿಲ್ಪ-ಚಿತ್ರ-ಹಾಗೂ ಆಚರಣೆಗಳಲ್ಲಿ ಅಲ್ಲದೆ ಅಲಂಕಾರಗಳಲ್ಲಿಯೂ ಬಳಸುತ್ತಾ ಬಂದಿರುತ್ತೇವೆ.

ಜೈನ, ಬೌದ್ಧ ಧರ್ಮಗಳಿಗೆ ಸಂಬಂಧಿಸಿದ ದಾಖಲೆಗಳಲ್ಲಿ ಅಂದರೆ ಸೂತ್ರಗ್ರಂಥಗಳಲ್ಲಿ ಕಲೆಗಳಿಗೆ ಸಂಬಂಧಿಸಿದ ಅಂಶಗಳು ಬಹಳ ಹಿಂದಿನವಾಗಿ ಹಾಗೂ ಅಧಿಕೃತವಾಗಿ ಕಂಡುಬರುತ್ತಿವೆ. ಇವುಗಳ ಕಾಲವನ್ನು ಕ್ರಿ. ಪೂ. ಮೂರನೆಯ ಶತಮಾನಕ್ಕೂ ಸೇರಿಸಬಹುದಾಗಿದೆ ಎಂದು ವಿದ್ವಾಂಸರು ನಿಶ್ಚಯಿಸುತ್ತಾರೆ. ಆದುದರಿಂದ ಜೈನ ಧರ್ಮವು ತನ್ನ ಆಧ್ಯಾತ್ಮಿಕ ಪ್ರತಿಭೆಗೆ ಅಳವಡಿಸಿಕೊಂಡಂತೆ ಪಂಚವರ್ಣಗಳನ್ನು ಗುರುತಿಸಿರುವುದರಿಂದ ಪಾಶ್ಚಾತ್ಯರ ವಿಚಾರಕ್ಕಿಂತಲೂ ಹೆಚ್ಚು ಪ್ರಾಮುಖ್ಯವನ್ನು ನೀಡಿದಂತೆ ಆಗುತ್ತಿದೆ.

ರಸಾಯನಿಕ ಶಾಸ್ತ್ರದ ಪರಿಶೀಲನೆಯಿಂದ ಬಣ್ಣಗಳಲ್ಲಿ ರಂಜಕದ ಸ್ಥಾನ ಹಿರಿದು. ಇಲ್ಲಿ ಕೆಲವು ಮುಖ್ಯ ಬಣ್ಣಗಳನ್ನು ಗಮನಿಸಬಹುದು, ೧. ಚಂದ್ರ=ರಸ+ಗಂಧಕ (ರಸಸಿಂಧೂರ). ೨. ಅರದಳ=ಗಂಧಕ+ಆರ್ಸೆನಿಕ್, ೩. ನೀಲೋಪಲ=ಗಂಧಕ+ಸಿಲಿಕೇಟ್....ಇವುಗಳಲ್ಲಿ ಗಂಧಕ→ಹಳದಿಯ ಪಾಲನ್ನು ಗುರುತಿಸಬಹುದು. ಕಪ್ಪಿಗೆ (ಮಸಿ) ಸಹಜವಾದ 'ಕಾರ್ಬನ್' ಆದರೆ ಸಫೇದ್ ಅಥವಾ ಬಿಳಿಗೆ ಲೆಡ್ ಕಾರ್ಬೊನೇಟ್+ಲೆಡ್ ಆಕ್ಸೈಡ್ ಸೇರುತ್ತವೆ. ಈ ಬಣ್ಣಗಳನ್ನು ಕಲಾವಿದರು ಸಾಮಾನ್ಯವಾಗಿ 'ಖನಿಜ ವರ್ಣ'ಗಳೆಂದು [Mineral Colours] ಗುರುತಿಸುತ್ತಾರೆ. ವರ್ಣರಂಜಿತ ಕಾಗದವನ್ನು ತಯಾರಿಸಲು ಕಳೆದ ಶತಮಾನದ ಮಧ್ಯಕಾಲದಿಂದ ಈ ಖನಿಜ ವರ್ಣಗಳನ್ನು ಬಳಸುತ್ತಿದ್ದಂತೆಯೂ ತಿಳಿದು ಬರು

ತ್ತದೆ. ಇದನ್ನು ಆಂಗ್ಲ ಭಾಷೆಯಲ್ಲಿ ಮಾರ್ಬಲಿಂಗ್ ಪ್ರೋಸೆಸ್ ಮತ್ತು Marbled Paper ಎಂದು ಕರೆಯುತ್ತಿದ್ದರಷ್ಟೆ. ಇಲ್ಲಿಯೂ ಹಳದಿ ಪ್ರಧಾನವಾದ ಒಂದು ಮಾಧ್ಯಮದಂತೆ (Medium) ದುಡಿಯುತ್ತದೆ. ಇದರಿಂದ ಹಸಿರು ಮತ್ತು ಕೆಂಪು ಬಣ್ಣಗಳನ್ನು ತಯಾರಿಸುವುದಂತೂ ನಮ್ಮ ಜನರ ರೂಢಿಯಲ್ಲಿ ಕಂಡುಬರುತ್ತದೆ. ನೇಯ್ಗೆಯವರಲ್ಲಿಯಂತೂ ಈ ಐದು ಬಣ್ಣಗಳು ತುಂಬ ಸಹಜವಾಗಿ ಬಳಕೆಯಾಗು ತ್ತವೆ. ರೇಷ್ಮೆಯಾಗಲಿ ಹತ್ತಿಯಾಗಲಿ ಈ ವರ್ಣ ವಿನ್ಯಾಸಕ್ಕೆ ಆತಂಕ ಕಂಡು ಬರುವುದಿಲ್ಲ.

## ನಾಲ್ಕು

ಪಂಪನು 'ಪಂಚರತ್ನ'ಗಳೆಂದು ಬಣ್ಣಗಳನ್ನು ಗುರುತಿಸುತ್ತಾನಷ್ಟೆ. ಆದರೆ ನವರತ್ನಗಳಲ್ಲಿ ಒಂದಾದ ಮಾಣಿಕ್ಯವನ್ನು ಮಾತ್ರ ಜಿನೇಂದ್ರನ ಪ್ರತಿಮೆಗೆ ಗುರುತಿ ಸಿದಂತೆ ತೋರುತ್ತದೆ. ಇದರಿಂದ ಆತನು 'ಪ್ರತಿಕೃತಿ'ಗೆ ಬಳಸಿದ್ದ ಮಾಣಿಕ್ಯ ಶಿಲೆ ಯನ್ನೂ (ವರ್ಣಸಹಿತ) ಸೂಚಿಸಿದಂತಾಗಿದೆ. ಇದರಿಂದ ಈ ಪ್ರತಿಮೆಯು ಬಗ್ಗೆ ಆತನ ಕಾಳಜಿ ವಿಶಿಷ್ಟವಾದುದೆಂಬುದನ್ನೂ ಅರಿತುಕೊಳ್ಳಬಹುದಾಗಿದೆ.

ಮೇಲೆ ಹೇಳಿರುವ ಆಧಾರಗಳಿಂದ ಈ ಮಾಣಿಕ್ಯಜಿನೇಂದ್ರನು ಪದ್ಮ ಪ್ರಭ ಅಥವಾ ವಾಸುಪೂಜ್ಯ ತೀರ್ಥಂಕರರಾಗಬೇಕಾಗುತ್ತದೆ. ಆದರೆ 'ಪದ್ಮಪ್ರಭ' ಎಂಬ ಹೆಸರು 'ಪಂಪ' ಎಂಬುದಕ್ಕೆ ತೀರ ಸಮೀಪದಿರಬೇಕೆಂಬ ಅನಿಸಿಕೆಯು ಅಮೂಲ್ಯವಾದುದಾಗುವುದರಿಂದ ಆತನ ಆರಾಧ್ಯ ದೈವವಾಗಿ 'ಪದ್ಮಪ್ರಭ'ನನ್ನು ಗುರುತಿಸುವುದೇ ಸಾಧುವಾಗುತ್ತದೆ.

ಈ ಪದ್ಮಪ್ರಭ ತೀರ್ಥಂಕರನ ತಂದೆ ಧಾರಣರಾಜ, ತಾಯಿ ಸುಸಿಮಾ. ಈತನ ಉತ್ಸೇದ (=ಎತ್ತರ) ೨೫೦ ಚಾಪಗಳು, ವರ್ಣವು ಕೆಂಪು. ಲಾಂಛನವು ಕಮಲ, ಆಯುಸ್ಸು ೩೦ ಲಕ್ಷ ಪೂರ್ವ, ಯಕ್ಷರು ಕುಸುಮ ಮತ್ತು ಮನೋವೇಗಿ, ಈತನ ನಿರ್ವಾಣ ಕ್ಷೇತ್ರವು ಸಮ್ಮೇದ ಪರ್ವತ. ಪಂಪನು 'ಪಂಚರತ್ನ'ಗಳೆಂದು ಕರೆಯು ವುದರಲ್ಲಿ ಮಣಿ ಮತ್ತು ಕಾಕಿಣಿ ಎಂಬುವಂತೆ ಗುರುತಿಸಿದ ಹಾಗೂ ರತ್ನವೆಂದರೆ ಜೈನಧರ್ಮ ಪರಿಭಾಷೆಯಲ್ಲಿ 'ಶ್ರೇಷ್ಠ ವಸ್ತು' ಎಂಬ ಅರ್ಥದಲ್ಲಿಯೇ ಬಳಸಿರಬಹು ದಾಗಿದೆ. (ಶಾಸ್ತ್ರಸಾರ ಸಮುಚ್ಚಯದಿಂದ ಸಂಗ್ರಹ)

ಇನ್ನು ಪಂಪನು ತನ್ನ 'ಆದಿಪುರಾಣಂ' ಕೃತಿಯ ೧೬ನೇ ಆಶ್ವಾಸದಲ್ಲಿ 'ಮಾಣಿಕ್ಯ ಜಿನೇಂದ್ರ ಬಿಂಬ'ದ ವರ್ಣನೆಯನ್ನು (೮ ವೃತ್ತಗಳು) ಗಮನಿಸ ಬಹುದು. ಈ ಮಾಣಿಕ್ಯ ಭಟ್ಟಾರಕನಿಗೆ ಕಮಲಪೀಠ, ರತ್ನಾಕರ, ರತ್ನತೋರಣ, ರತ್ನಾಸನ, ರತ್ನಾತಪವಾರಣ.

ಈತನ ಪಂಕ್ತಿಗೆ ತೀರ್ಥಂಕರರು ಇದ್ದರೂ 'ಏಕರೂಪಮೆಜಗಕ್ಕಾಶ್ಚರ್ಯ ಮಂಪುಟ್ಟಿಸುತ್ತಿದೆಮಾಣಿಕ್ಯಜಿನೇಂದ್ರಬಿಂಬಮೆಜಯಂಭದ್ರಂಶುಭಂ ಮಂಗಳಂ ||೫||' ಎನ್ನುವ ಹಿರಿಮೆಯಂತೂ ವಿಶೇಷವೇ ಆಗಿದೆ.

ಅಲ್ಲದೆ ಈತನಿಗೆ ಕನಕಪ್ರಭಾಸರ, ಪೀತಾಂಬರ, ಪದ್ಮವಿಷ್ಟರ,-ಗಳಿದ್ದು, 'ಬಾತ್ರ್ಯ ತೀರ್ದಪುದೇ ಪೊರ್ದಲೊಡಂ ವಿನೇಯ ಜನಸಂಘಾತಕ್ಕೆ ಮಾಣಿಕ್ಯದೇವ ಪದಾಂಬೋಜವರಪ್ರಸಾದಂ' ಎನ್ನುತ್ತಾನೆ.

ಈತನ 'ಚಕ್ರವರ್ತಿ' ವೈಭವವನ್ನು ಐಂದ್ರಮೈಹಿಕ ಪಾರತ್ರಿಕ ಭೋಗಗಳನ್ನೂ ಕೊಡುವವನು ಎಂದು ಮಾಣಿಕ್ಯಭಟ್ಟಾರ ಕಾಂತಿಕಮಂ ಸಾರೆ (ವಿನೇಯ-ರಾಜಿಗೆ) ಎಂದೂ ಹೊಗಳುತ್ತಾನೆ.

'ಆವೆಡೆಯೊಳಂಕ್ಕೆಗಾವ ಮಾಣಿಕ್ಯದೇವ ಪದಾಂಭೋಜಮೆ ಭವ್ಯಕೋಟಿಗೆ,' ಎಂದಿರುವುದಲ್ಲದೆ 'ಸಂಸಾರಮಂ ದಾಂಟುವೂರ್ಜ್ಜಿತ ಪುಣ್ಯಂಗಪವರ್ಗ್ಗ ಲಕ್ಷ್ಮಿ ವರೆಗಂ ಸಂಸಾರ ಸಾರೋದಯೋದಿತ 'ಮಾಣಿಕ್ಯ ಜಿನಸ್ತವಾವಳಿ' ಎಂದೂ ಹೇಳುತ್ತಾನೆ. ಆದುದರಿಂದ ಈ ಮಾಣಿಕ್ಯ ಜಿನೇಂದ್ರನ ವಿಷಯವು ತುಂಬ ಗಂಭೀರವೂ ಆದಿತೀರ್ಥಂಕರನಾಗಿರಲಾರನೆಂಬುದೂ ಮನವಿಯಾಗುತ್ತದೆ.

* * *

ಪಂಪನಿಂದ 'ಮಾಣಿಕ್ಯ ಜಿನಸ್ತವಾವಳಿ'ಯು ನಮ್ಮ ಗಮನಕ್ಕೆ ಬಂದಂತೆ 'ಪದ್ಮಪ್ರಭ'ನ ವಿವರಗಳು ಶಾಸ್ತ್ರಸಾರ ಸಮುಚ್ಚಯದಿಂದ ಸೂಚಿತವಾಗಿರುವಂತೆ ಗಮನಿಸಿದರೆ ಗಂಗಾಧರಂ ಶಾಸನವು ವೃಷಭಾದ್ರಿಗೆ (ಸಮ್ಮೇದಪರ್ವತಸ್ಥವಾದುದು) ಸೇರಿದೆಯುಷ್ಟೆ. ಈ ಪಂಪಾಭಿನಾನಾಜನ ಶಾಸನದಲ್ಲಿ ಈ ವೃಷಭಗಿರಿಯನ್ನು ಸಿದ್ಧ ಶಿಲೆಯಾಗಿ ಮಾರ್ಪಡಿಸಿರಬಹುದಾದ ವಿಚಾರವೂ ಬರುತ್ತದೆ. (ಇದನ್ನು ನೇ. ವೆಂಕಟರಮಣಯ್ಯನವರು 'ಬೊಮ್ಮಲಗುಟ್ಟ' ಎಂದು ಕರೆಯುವರೆಂಬುದನ್ನೂ ಗಮನಿಸಬಹುದು). ಇದರ ಆದ್ಯಂತವೆಂಬಂತೆ 'ಜಿನಬಿಂಬಮುಲುನು, ಚಕ್ರೇಶ್ವರಿಯುನು, ಮಱಿಕೊನ್ನಿದೇವತಾಪ್ರತಿಮಲನು' ರಚಿಸಿರುವುದಲ್ಲದೆ ತ್ರಿಭುವನತಿಲಕವೆಂಬ ಬಸದಿಯನ್ನೂ ಕವಿತಾಗುಣಾರ್ಣವ ಎಂಬ ತಟಾಕವನ್ನೂ ರಚಿಸಿರುವ ವಿಷಯವೂ ಬರುತ್ತವೆ.

ಅಲ್ಲದೆ ಈ ಗಂಗಾಧರಂ ಶಾಸನದಲ್ಲಿ 'ಧರ್ಮಪುರದುತ್ತರ ದಿಗ್ಭಾಗದ ವೃಷಭಗಿರಿಯೆಂಬನಾದಿ ಸಂಸಿದ್ಧ ತೀರ್ತ್ಥದ ದಕ್ಷಿಣ ದಿಶಾಭಾಗದೀ ಸಿದ್ಧಶಿಲೆಯೊಳ್ತಮ್ಮ ಕುಲದೈವ ಮಾಸ್ಯನ್ತ ಜಿನ ಬಿಂಬಗಳುಮಂ ಚಕ್ರೇಶ್ವರಿಯುಮಂ ಪೆಱವುಂ ಜಿನ ಪ್ರತಿಮೆಗಳುಮಂ ......ಮಾಡಿಸಿದಂ' ಎಂಬ ಒಕ್ಕಣೆಯಿರುವುದರಿಂದಲೂ ಪಂಪ ಹಾಗೂ ಆತನ ತಮ್ಮನಿಗೂ 'ಕುಲದೈವ'ವಿರಬೇಕೆಂಬುದು ಸಹಜವಾದ ತರ್ಕವಾದೀತು. ಅಂತೆಯೇ ಇವರ ಕುಲದೈವವೆಂಬುದನ್ನು 'ಮಾಣಿಕ್ಯ ಜಿನೇಂದ್ರಂ' ಎಂದು ಗುರುತಿಸಿದಲ್ಲಿ ತಪ್ಪಾಗಲಾರದಷ್ಟೆ?

ಪಂಪಕವಿಯು ತನ್ನ ವೈಬಣ್ಣಕ್ಕೂ 'ಜಿನೇಂದ್ರ'ನ ವೈಬಣ್ಣಕ್ಕೂ ಇರುವ ಅಂತರವನ್ನು ಚೆನ್ನಾಗಿಯೇ ತಿಳಿದು ವರ್ಣಿಸಿದ್ದಾನೆ. ಈ ಬಗೆಯೂ ಪಂಪ ಕವಿಯ ಕೃತಿಗಳಲ್ಲಿ ಕಂಡುಬರುವ ಒಂದು ವಿಶೇಷ ಕಾವ್ಯ ಗುಣವೂ ಆದೀತು. ಆತನು ಯಾವುದೇ ವರ್ಣನೆಗೆ ತೊಡಗಿದ್ದರೂ ಅದರ ಖಚಿತವಾದ ರೂಪನ್ನು ಸೃಷ್ಟಿಸುತ್ತಾನೆ. ಆದುದರಿಂದ ಪದ್ಮಪ್ರಭ ಎಂಬ ಹೆಸರಿನಲ್ಲಿ ಪಂಪನ ಹೆಸರನ್ನು ಕಾಣುವ ಒಂದು ಸೂಕ್ಷ್ಮ ಸಂದಿಗ್ಧತೆಯನ್ನು ಗಮನಿಸಿಯೇ ವಿಚಾರ ಮಾಡಬೇಕಾಗುತ್ತದೆ. ಪಂಪನ ಕುಲದೈವ ಮತ್ತು ಅವನ ಹುಟ್ಟು ಹೆಸರುಗಳು ಒಂದೇ ಆಗಿರಬಹುದೆಂಬ ನಂಬಿಕೆಯು ಗಟ್ಟಿಯಾದುದಾದರೂ ಈ ಕೊರತೆಯು ಮಾತ್ರ ಉಳಿದು ಬಿಡುವುದೂ ಸಾಧ್ಯ.

ಪಂಪ, ಪಂಪಾಪತಿ, ಹಂಪೆ—ಇವು ಮೂರರಲ್ಲಿಯೂ 'ಪಂಪ'ವಿರುವುದು ಸಹಜ. ಭಾಷಾಶಾಸ್ತ್ರದ ದೃಷ್ಟಿಯಿಂದ 'ಹಂಪೆ'ಯನ್ನು ಪಂಪನ ಕಾಲಕ್ಕಿಂತ ಈಚಿನದೆಂದೂ ರೂಢಿಯಲ್ಲಿ ಕಂಡುಬಂದುದೆಂದೂ ಹೇಳಬಹುದಷ್ಟೆ.

ಹಂಪೆಗೆ ಇರುವ ಸ್ಥಳಪುರಾಣದಿಂದ ರಾಮಾಯಣ ಕಾಲದ ಗುರುತು ಸಿಕ್ಕುತ್ತದೆಯಾದರೂ ಅಲ್ಲಿ ಹಂಪೆ ಮತ್ತು ಪಂಪಾಪತಿ ಹೆಸರುಗಳು ಸಿಕ್ಕುವುದಿಲ್ಲ. ನಮಗೆ 'ಪಂಪ' ಎಂಬುದಕ್ಕೆ ಇರುವ ಇತಿಹಾಸವೇ 'ಹಂಪೆ'ಗಿಂತ ಹಳೆಯದು. ಪಂಪನ ಮತ್ತು ಅಭಿನವಪಂಪ ಇವರ ಕಾಲಕ್ಕೆ 'ಪಂಪಾಪತಿ' ಎಂಬುದು ಸೇರಬಹುದಷ್ಟೆ. ಆದುದರಿಂದ ಈ 'ವಿರೂಪಾಕ್ಷ'ನೆಂದು ಕರೆಯಿಸಿಕೊಳ್ಳುವ 'ಶಿವ'ನು ಹೇಗೋ ರೂಢಿಯಲ್ಲಿ ಹುಟ್ಟಿಕೊಂಡಿರಬಹುದಾಗಿದೆ. ಆದುದರಿಂದ 'ಪಂಪ' ಪದದ ಹಳಮೆಯೂ 'ಪಂಪಾಪತಿ' ಎನ್ನುವುದರಲ್ಲಿ 'ರಾಮೇಶ್ವರ' ಎನ್ನುವಂತೆ ಪೌರಾಣಿಕ ಸಂಬಂಧದಿಂದ ಮಾತ್ರ ಬರಬೇಕಾಗುತ್ತದೆ. ಇಲ್ಲಿಯ ತಿಳುವಳಿಕೆಯು ಅವಿಗೆ ಬಂದರೆ ಒಳ್ಳೆಯದು. ಪಂಪ ಕವಿಗೂ ವಿರೂಪಾಕ್ಷನಿಗೂ ಸಂಬಂಧವುಂಟಾಗುವುದಿಲ್ಲ.

## ಮುಗಿತಾಯದಲ್ಲಿ

೧. ಪಂಪ ಪದದ ನಿರ್ವಚನ—ಪಂಪಕವಿಯಿಂದಲೇ (ಆತನ ಕೃತಿಗಳಿಂದ ಮತ್ತು ಶಾಸನಗಳಿಂದ) ಗುರುತು ಹತ್ತಿದ ಈ ಪದವು ಮೂಲತಃ ಕನ್ನಡವಿರಲಾರದು. ಕುಮಾರವ್ಯಾಸ ಎಂಬುದರಂತೆ ಆತನಿಗೂ ಗುರುವಿನ ಸಂಬಂಧದಿಂದ ಹುಟ್ಟಿರಬಹುದಾಗಿದೆ. ಅದುದರಿಂದ 'ಪಂಪಂ' ಎಂಬುದನ್ನು ಆತನ ಪ್ರೀತಿಯ ಸೋದರ ಜಿನವಲ್ಲಭ ಕೂಡ ಶಾಸನದಲ್ಲಿ ಪಂಪಾರ್ಯಂ ಎಂದೇ ಬರೆಯಿಸಿದ್ದಾನೆ.

ಆದುದರಿಂದ ಕನ್ನಡವೂ ಅಲ್ಲದ ಸಂಸ್ಕೃತವೂ ಅಲ್ಲದ ಒಬ್ಬ ಕವಿಯ ಅತ್ಯಂತ ಆತ್ಮೀಯ ಪದವಾದ ಈ 'ಪಂಪ' ಎಂಬುದಕ್ಕೆ ಗುರುಮುಖೇನ ಬಂದಿರುವಾಗಲೂ ಇದು ಅರ್ಧಮಾಗಧಿಯ ಪದವಾಗಿರಲು ಸಾಕು.

ನನಗೆ ದೊರಕಿರುವ ಒಂದು ಅರ್ಧಮಾಗಧಿ ಕಥೆ 'ಪಇಣ್ಣಾಇಂ ಸುತ್ತಾಇಂ' ಎಂಬ ಕೃತಿಯಲ್ಲಿ ಎರಡು ಈ ಬಗೆಯ ಪ್ರಯೋಗಗಳನ್ನು ಕಂಡಿದ್ದೇನೆ.

೧. ಬಂಭಪರಿಹರಾಣಂ ಎಂಬಲ್ಲಿ ಬ್ರಹ್ಮ > ಬಂಭ

೨. ಬ್ರಹ್ಮ (ಎಂಬುದೇ) ಬಂಭ ಆಗಿದೆ.

ಆದರಲ್ಲಿಯೇ ಧರ್ಮ > ಧಮ್ಮ ಆಗಿರುವುದುಂಟು. ಆದುದರಿಂದ ಪವರ್ಗ ದಲ್ಲಿರುವ Sonant = ಮೃದುವರ್ಣ 'ಬ' ಎಂಬುದು aspirate ಆಗದಿರುವಾಗ ಅಥವಾ ಆಗಿರುವಾಗಲೂ ಅನುಸ್ವಾರವಾದ 'ಮ' ಎಂಬುದು 'ಪಪ್ಪ' ಎಂಬುದ ರಂತೆ ಆಗುತ್ತದೆ-ಎನ್ನಬಹುದು. ಆದುದರಿಂದ ಪದ್ಮ > ಪಪ್ಪ (ಪಂಪ) ಆಗಿರುವ ಸಹಜ ರೀತಿಯನ್ನು ಕಾಣುತ್ತೇವೆ.

ಹೀಗೆ ಪದ್ಮಪ್ರಭ-ಎಂಬ ಹೆಸರು ಹುಟ್ಟು ಹೆಸರಾಗಿಯೂ ಉಳಿದು ಗುರು ಮುಖೇನ ಪಂಪ (=ಪಪ್ಪ) ಎಂದಾಗಿ ಕವಿಯ ಆತ್ಮಪ್ರತ್ಯಯಕ್ಕೆ ಒಂದು ಸತ್ವವಾ ಗಿಯೂ ಇರಬಹುದು. ಇಲ್ಲಿಯ (ಪಂಪನ) ಚೈತನ್ಯಕ್ಕೆ ಇಂಬುಕೊಟ್ಟಂತೆಯೂ ಕನ್ನಡಕ್ಕೆ ಒಂದು ವಿಶೇಷ ಪದವನ್ನು ನೀಡಿದಂತೆಯೂ (ಹೀಗೆಯೇ ಅಭಿನವಪಂಪ) ಎಂಬ ಬಿರುದು ಸಮರ್ಥನೀಯವೂ ಆದೀತು.

೨. ಪಂಪನಿಗೆ ಪಂಚರತ್ನಗಳೂ ಪಂಚವರ್ಣಗಳಲ್ಲಿ ೨೪ ತೀರ್ಥಂಕರರನ್ನು ಗುರುತಿಸುವ ಸಂಪ್ರದಾಯವೂ ಆಚರಣೆಗಳೂ ತಿಳಿದಿದ್ದವು ಎಂಬುದಕ್ಕೆ ಆತನು ಆದಿಪುರಾಣಂ-ಕಾವ್ಯದ ಷೋಡಶಾಶ್ವಾಸನದಲ್ಲಿ ೨೪ ತೀರ್ಥಂಕರರನ್ನು ಪ್ರಾರ್ಥಿಸುವು ದಕ್ಕೂ ಮುಂಚೆ ಮಾಣಿಕ್ಯ ಜಿನೇಂದ್ರನನ್ನು ವಿಶೇಷವಾಗಿ ವಂದಿಸಿರುವುದು ಗಮ ನಾರ್ಹವಾಗಿದೆ. ಆದುದರಿಂದ ಈ ಮಾಣಿಕ್ಯ ಜಿನೇಂದ್ರನು ಬೇರೆ ಯಾರೂ ಆಗಿರದೆ ಪದ್ಮಪ್ರಭ ಆಗಿರುವುದು ಸಾಕು.

---

ಕೃತಜ್ಞತೆಗಳು: ೧ ಡಾ॥ ಸೂರ್ಯನಾಥ ಕಾಮತ್, ೨. ಕನ್ನಡ ನಿಘಂಟು ಅಧಿಕಾರಿಗಳು, ಮುಖ್ಯವಾಗಿ ಶ್ರೀಮತಿ ಜಿ.ಕೆ. ಗೋವಿಂದರಾವ್, ೩. ಡಾ॥ ಕಾರ್ಲೋಸ್, ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ.

# ಕೀರ್ತನ ಸಾಹಿತ್ಯದ ಹಿನ್ನಲೆಯಲ್ಲಿ ಕನಕದಾಸ

ಡಾ|| ಬಸವರಾಜ ಸಬರದ

ಕನಕದಾಸ ಮೂಲತಹ ಕವಿ, ನಂತರ ಕೀರ್ತನಕಾರ. ಆತನ ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರ ಈ ಕೃತಿಗಳಲ್ಲಿ ಅರ್ಥ ಪೂರ್ಣವಾದ ಕಾವ್ಯವಿದೆ. ಆತನ ಸಮಕಾಲೀನ ದಾಸರೆಲ್ಲ ಕೇವಲ ಕೀರ್ತನೆಗಳನ್ನು ಮಾತ್ರ ಬರೆದರೆ ಕನಕದಾಸ ಮಹತ್ವದ ಕಾವ್ಯಕೃತಿಗಳ ಜತೆಗೆ ಕೀರ್ತನೆಗಳನ್ನು ಬರೆದಿರುವುದರಿಂದ ಮಧ್ಯಕಾಲೀನ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಒಬ್ಬ ಪ್ರಮುಖ ಕವಿಯಾಗಿ ಗಮನ ಸೆಳೆಯುತ್ತಾನೆ. ಆತನ ಕೀರ್ತನೆಗಳಲ್ಲಿ ಅದ್ಭುತ ವಾದ ಕಲ್ಪಕತೆ ಇದೆ. ಪರಿಣಾಮಕಾರಿಯಾದ ಸಾಮಾಜಿಕ ವಿಡಂಬನೆ ಇದೆ.

ಶೂದ್ರರು-ದಲಿತರು-ದುಡಿವ ವರ್ಗದವರಿಂದ ವಚನಚಳವಳಿ ಪ್ರಾರಂಭ ವಾದರೆ, ಉಚ್ಚವರ್ಗದಲ್ಲಿ ಹುಟ್ಟಿಬಂದವರಿಂದ ದಾಸಪರಂಪರೆ ಬೆಳೆದು ಬಂದಿದೆ. ಆದರೆ ಕನಕದಾಸನಂತಹ ಒಬ್ಬ ಶೂದ್ರ ಈ ದಾಸಪರಂಪರೆಯಲ್ಲಿರುವುದರಿಂದಲೇ ಆ ಸಾಹಿತ್ಯಕ್ಕೆ ಮಹತ್ವ ಬಂದಿದೆ. ವಚನ ಚಳವಳಿಗೂ ದಾಸ ಪರಂಪರೆಗೂ ತುಂಬಾ ವ್ಯತ್ಯಾಸವಿದೆ. ಭಕ್ತಿಯೊಂದೇ ಅಲ್ಲಿಯ ಸಾಮ್ಯವಾಗಿದೆ. ವಚನ ಚಳವಳಿಯಲ್ಲಿ ಸೈದ್ಧಾಂತಿಕ ಸ್ಪಷ್ಟತೆ, ಸಂಘಟನೆಯ ಶಿಸ್ತು, ಹೋರಾಟದ ಮನೋಭಾವ ಕಂಡು ಬಂದರೆ ದಾಸಪರಂಪರೆಯಲ್ಲಿ ಇವು ಯಾವೂ ಇಲ್ಲ. ಪರಿಸ್ಥಿತಿ ಹೀಗಿದ್ದಾಗ ಕನಕದಾಸನಂತಹ ಒಬ್ಬ ಶೂದ್ರ ಆ ಹೊತ್ತಿನ ಮನುಷ್ಯ ಪ್ರಯತ್ನದ ಪ್ರತಿನಿಧಿ ಯಾಗಿ ದನಿ ಎತ್ತಿ ನಿಂತಿರುವದು ತುಂಬಾ ಮಹತ್ವದ ಸಂಗತಿಯಾಗುತ್ತದೆ. ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೆದ್ದ ಕನಕದಾಸ ಏಕಾಂಗಿ ವೀರನಂತೆ ಕಾಣುತ್ತಾನೆ. ವಚನಕಾರರ ಹೋರಾಟದ ಹಿಂದೆ ಸಂಘಟನೆಯಿದೆ. ಅವರ ಪ್ರತಿ ಭಟನೆಯ ಹಿಂದೆ ಸೈದ್ಧಾಂತಿಕವಾದ ಶಿಸ್ತು ಇದೆ. ಇಂತಹ ಸವಲತ್ತುಗಳ ಸಹಾಯ ವಿರದ ಸಂದರ್ಭದಲ್ಲಿಯೂ ಕನಕ ಶೋಷಣೆಯ ವಿರುದ್ಧ ದನಿ ಎತ್ತಿ ನಿಲ್ಲುವುದು; ಅಸಮಾನತೆಯ ವಿರುದ್ಧ ಪ್ರತಿಭಟಿಸಿ ನುಡಿಯುವದು ಸಾಹಿತ್ಯ - ಸಾಂಸ್ಕೃತಿಕ

ಸಂದರ್ಭದಲ್ಲಿ ತುಂಬಾ ಮುಖ್ಯವಾಗುತ್ತದೆ. ಆದರೂ ಕೂಡ ಕನಕದಾಸ ವಚನ ಕಾರರಂತೆ ಸ್ಪಷ್ಟತೆಯಿಂದ ಹೋರಾಡಲಾರ, ಸಂಪೂರ್ಣವಾಗಿ ಪ್ರತಿಭಟಿಸಲಾರ. ಇದಕ್ಕೆ ಮುಖ್ಯ ಕಾರಣ ಆತನ ಸಮಕಾಲೀನ ಸಂದರ್ಭದ ಪರಿಸರ ಹಾಗೂ ದಾಸ ಪರಂಪರೆಯ ಇತಿ ಮಿತಿಗಳು. ವ್ಯಾಸರಾಯರಾಗಲಿ, ಪುರಂದರದಾಸರಾಗಲಿ ಎಷ್ಟೇ ಸಾಮಾಜಿಕ ವಿಡಂಬನೆಯನ್ನು ಮಾಡಿದರೂ ಅವರು ಪ್ರಮುಖ ಪ್ರತಿಭಟನಾಕಾರ ರಾಗಲಾರರು. ಮತೀಯ ಚೌಕಟ್ಟುಗಳನ್ನು ಕಿತ್ತೊಗೆದು ಬರಲಾರದ ವ್ಯಕ್ತಿ ಎಷ್ಟೇ ಸುಧಾರಣಾವಾದಿಯಾದರೂ ಪ್ರಮುಖ ಬಂಡಾಯಗಾರನಾಗಲಾರ. ಕನಕ ದಾಸರಲ್ಲಿ ಮಾತ್ರ ಇವೆರಡರ ನಡುವಿನ ದ್ವಂದ್ವವಿದೆ. ಈ ಅಂಶ ಅವರ ಕೀರ್ತನೆ ಗಳುದ್ದಕ್ಕೂ ಎದ್ದು ಕಾಣುತ್ತದೆ. ಒಂದು ಕಡೆ ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೇಳುವ ಶೂದ್ರ ಗುಣ; ಮತ್ತೊಂದೆಡೆ ದಾಸಪರಂಪರೆಯ ಗೆರೆಗಳನ್ನು ದಾಟಲಾಗದ ಭಾವುಕತನ; ಇವೆರಡರ ನಡುವೆಯೇ ಕನಕದಾಸರ ಹೋರಾಟವಿದೆ.

ತನಗೆ ಪೂರಕ ಪರಿಸರವಿರದಿದ್ದರೂ ಇದ್ದ ಸಂದರ್ಭಗಳನ್ನೇ ಸದುಪಯೋಗ ಪಡಿಸಿಕೊಂಡು ಇಲ್ಲಿಯ ಅಸಮಾನತೆಯ ವಿರುದ್ಧ ದನಿ ಎತ್ತಿದ ಕನಕದಾಸ ಸಮಾಜ ವ್ಯವಸ್ಥೆಯಲ್ಲಿ ನಡೆದ ಮಾನವೀಯ ಹೋರಾಟಗಳಿಗೆ ಉತ್ತಮ ಉದಾ ಹರಣೆಯಾಗಿದ್ದಾನೆ. ಕನಕದಾಸನು ವ್ಯಾಸರಾಯರಂತಹ ಗುರುಗಳನ್ನು ಮೆಚ್ಚಿ ಕೊಂಡ ಒಬ್ಬ ಭಾಗವತ. ಆತ ಒಬ್ಬ ಅರ್ಥಪೂರ್ಣದಾಸನೇ ಹೊರತು ವೈದಿಕ ಮತದ ಪ್ರಚಾರಕನಲ್ಲ. ವ್ಯಾಸರಾಯರೊಡ್ಡಿದ ಪರೀಕ್ಷೆಗಳಲ್ಲಿ ಉತ್ತೀರ್ಣನಾದ ಕನಕದಾಸ ವ್ಯಾಸರಾಯರ ಮೆಚ್ಚಿನ ಶಿಷ್ಯ. ತನ್ನ ಅಧ್ಯಯನ ಮತ್ತು ಪರಿಸರದ ಪ್ರಭಾವದಿಂದ ಆತ ಕೃಷ್ಣಭಕ್ತನಾಗಿರಬಹುದು. ಮೆಚ್ಚಿನ ಶಿಷ್ಯನಾದ ಕೂಡಲೆ ಆತ ಮಾಧ್ವ ಅಥವಾ ರಾಮಾನುಜರ ಮತಕ್ಕೆ ಸೇರಿದವನೆಂದು ತಿಳಿದುಕೊಳ್ಳುವದು ಸೂಕ್ತವಲ್ಲ. ಮನುಷ್ಯ ನಿರ್ಮಿಸಿದ ಎಲ್ಲ ಮತಗಳನ್ನು ಮೀರಿ ಬೆಳೆದ ಕನಕದಾಸ ವೈದಿಕಮತದ ನ್ಯೂನತೆಗಳನ್ನೆಲ್ಲ ಖಂಡಿಸಿದ್ದಾನೆ. ಮತಗಳಿಂದ ದೂರ ಹೋಗಿ ಮಾನವೀಯತೆಯನ್ನು ಸ್ಥಾಪಿಸುವದೇ ಆತನ ಮೂಲ ಉದ್ದೇಶವಾಗಿದೆ. ಈ ವಿಷಯ ಕನಕನ ಕೀರ್ತನೆಗಳಿಂದ ಸ್ಪಷ್ಟವಾಗುತ್ತದೆ.

ಭಕ್ತಿ ಪಂಥಗಳ ಸಂದರ್ಭದಲ್ಲಿ, ವಚನಚಳವಳಿಯ ನಂತರ ಮತ್ತೆ ಪ್ರತಿ ಭಟನೆಯ ಧ್ವನಿಯಾಗಿ ದಾಸಪರಂಪರೆಯಲ್ಲಿ ಬೆಳಗಿ ನಿಂತವನು ಕನಕದಾಸ. ಶೂದ್ರ-ದಲಿತ ಪ್ರತಿಭೆಗಳು ಅರ್ಥಪೂರ್ಣ ಕಾವ್ಯವನ್ನು-ಅದ್ಭುತ ಕಲಾವಂತಿಕೆಯನ್ನು-ನಿರಂತರವಾದ ಜೀವನಪ್ರೀತಿಯನ್ನು ಕೊಡಬಲ್ಲವೆಂಬುದಕ್ಕೆ ವಾಲ್ಮೀಕಿ, ವ್ಯಾಸ, ಕಾಳಿದಾಸ, ಕನಕದಾಸರಂತವರು ಪ್ರಮುಖ ಉದಾಹರಣೆಯಾಗಿದ್ದಾರೆ.

ದೈವಲೀಲೆಯ ವರ್ಣನೆಯ ಜತೆಗೆ ಆತ್ಮನಿವೇದನೆ ಮತ್ತು ಸಾಮಾಜಿಕ ವಿಡಂಬನೆ ಕನಕದಾಸನ ಕೀರ್ತನೆಗಳಲ್ಲಿ ಕಾಣುವ ಪ್ರಮುಖ ಅಂಶಗಳಾಗಿವೆ. ಕೆಳ ವರ್ಗದಿಂದ ಹೋಗಿ ದಾಸಪರಂಪರೆಯಲ್ಲಿ ಸೇರಿದ ಕನಕದಾಸ, ತನ್ನ ಹಿಂದಿನ ನೆನಪು

ಗಳನ್ನು ಕಳೆದುಕೊಳ್ಳಲಾರದೆ, ಮುಂದಿದ್ದ ದಾಸ ಪದವಿಯಲ್ಲಿ ಸಂಪೂರ್ಣವಾಗಿ ಕರಗಿ ಹೋಗದೆ, ತಾಕಲಾಡುತ್ತಿರುವ ಚಿತ್ರಣ ಕಂಡು ಬರುತ್ತದೆ. ಎರಡು ಭಿನ್ನ ಸಂಸ್ಕೃತಿಗಳ ಗೊಂದಲದಲ್ಲಿ ಸಿಕ್ಕ ಕನಕನಂತಹ ಪ್ರತಿಭಾಶಾಲಿಯೊಬ್ಬನ ಮನಸ್ಸು ತೀವ್ರ ತುಡಿತಕ್ಕೊಳಗಾಗಿರುವುದು ಆತನ ಕೀರ್ತನೆಗಳಿಂದ ಕಂಡುಬರುತ್ತದೆ. ವಚನ ಚಳವಳಿಯಂತಹ ಸಂದರ್ಭ–ಸಂಘಟನೆ–ಅವಕಾಶ ಕನಕದಾಸನಿಗೆ ಇರದೇ ಇದ್ದುದರಿಂದ ಆತ ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕು. ಈಗ ಉಡುಪಿಯಲ್ಲಿ ರುವ ಕನಕನ ಕಿಂಡಿಯ ಕಥೆಯೇ ಇದಕ್ಕೆ ಸ್ಪಷ್ಟ ಉದಾಹರಣೆಯಾಗಿದೆ. ಮಾದಾರ ಚೆನ್ನಯ್ಯನಂತೆ, ಅಂಬಿಗರ ಚೌಡಯ್ಯನಂತೆ ಝಳಪಿಸುವ ಖಡ್ಗವಾಗಿ ಬೆಳೆಯು ವುದು ಕನಕದಾಸನಿಗೆ ಅಸಾಧ್ಯವಾಯಿತು. ಅಂತಹ ವೈರುಧ್ಯತೆಯ ನಡುವೆಯೂ ಆತ ಆ ಮತೀಯ ಶಕ್ತಿಗಳನ್ನು ಎದುರಿಸುವದು, ಅವರ ಗೊಡ್ಡು ಸಂಪ್ರದಾಯ ಗಳನ್ನು ಖಂಡಿಸುವದು, ಅವರ ಸಣ್ಣತನಗಳನ್ನು ಎತ್ತಿ ತೋರಿಸುವದು ತುಂಬಾ ಮುಖ್ಯವೆನಿಸುತ್ತದೆ. ಬಿಕ್ಕಟ್ಟುಗಳ ನಡುವೆ ಬೆಳೆದ ಏಕಾಂಗಿ ವೀರನ ಹಾಗೆ ಕನಕ ದಾಸ ಕಾಣುತ್ತಾನೆ.

ಸಂಖ್ಯೆಯಲ್ಲಿ ಕನಕದಾಸರ ಕೀರ್ತನೆಗಳು, ಪುರಂದರದಾಸರ ಕೀರ್ತನೆಗಳಿ ಗಿಂತ ಕಡಿಮೆಯೆಂದೆನಿಸಿದರೂ ಸತ್ವದ ದೃಷ್ಟಿಯಿಂದ, ತೀವ್ರತೆಯ ಗುಣದಿಂದ ತುಂಬಾ ಗಮನಾರ್ಹವಾಗಿವೆ. ಉಳಿದ ದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಹೆಚ್ಚಾಗಿದೆ. ಕೀರ್ತನ ಸಾಹಿತ್ಯದಲ್ಲಿ ಮೊದಲಬಾರಿಗೆ ಗಂಭೀರ ಚಿಂತನೆಗಳನ್ನು ಮೂಡಿಸುತ್ತ ಅನೇಕ ಪ್ರಶ್ನೆ–ಉಪಪ್ರಶ್ನೆಗಳ ಮೂಲಕ ಕನಕದಾಸರು ಯಜಮಾನ ಸಂಸ್ಕೃತಿಯ ಆಚರಣೆಗಳನ್ನು ವೈದಿಕಮತದ ಮೌಢ್ಯತೆ ಗಳನ್ನು ತೀವ್ರರೀತಿಯಿಂದ ವಿಡಂಬಿಸಿದ್ದಾರೆ.

> ವೇದಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
> ಬೋಧನೆಯ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
> ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರಳು ಮಾಡಿ
> ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ||
> ಸಂನ್ಯಾಸಿ ಜಂಗಮ ಜೋಗಿ ಜಟ್ಟಿಮೊಂಡ ಭೈರಾಗಿ
> ನಾನಾವೇಷಗಳೆಲ್ಲ ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ||
>
> —(ಪುಟ: ೧೭, ಜನಪ್ರಿಯ ಕನಕ ಸಂಪುಟ)

'ಎಲ್ಲಾರೂ ಮಾಡುವದು ಹೊಟ್ಟೆಗಾಗಿ' ಎನ್ನುವ ಈ ಕೀರ್ತನೆಯ ಮುಖಾಂತರ ಕನಕದಾಸರು ಇಲ್ಲಿ ಬದುಕಿನ ವಟ್ಟ ಸತ್ಯವನ್ನು ಸಾರಿದ್ದಾರೆ. ತಾಳ ದಂಡಿಗೆ ಹಿಡಿದುಕೊಂಡು, ಅಂದಣಪಲ್ಲಕ್ಕಿ ಏರಿಕೊಂಡು, ವೇದಶಾಸ್ತ್ರ ಹೇಳಿ ಕೊಂಡು, ನಾನಾ ವೇಷವ ಧರಿಸುವದು ಎಲ್ಲಾ ಹೊಟ್ಟೆಗಾಗಿಯೇ ಎನ್ನುವಂತಹ

ಮಾತುಗಳಲ್ಲಿ ವಾಸ್ತವತೆಯ ಜತೆಗೆ, ಈ ಸಮಾಜ ವ್ಯವಸ್ಥೆಯ ಪೊಳ್ಳುತನವೂ ಎದ್ದು ಕಾಣುತ್ತದೆ. ಈ ಕೀರ್ತನ ಮೂಲಭೂತವಾಗಿ ಎರಡು ಹಸಿವುಗಳಿಗೆ ಸಂಬಂಧಿಸಿದ್ದಾಗಿದೆ. ಒಂದು ಹೊಟ್ಟೆಯ ಮತ್ತೊಂದು ಮುಕ್ತಿಯ ಹಸಿವು. ಭಕ್ತಿ ಪಂಥದ ಸಾಹಿತ್ಯದಲ್ಲಿ ಇಂತಹ ಹೋಲಿಕೆಗಳು ಸಾಮಾನ್ಯ. ಹಸಿವಿನ ಮೂಲಭೂತ ಪ್ರಶ್ನೆಯನ್ನು ಎತ್ತಿದ ಈ ಕೀರ್ತನೆ ಅದರ ಹುಡುಕಾಟವನ್ನು ಪ್ರಾರಂಭಿಸದೆ, ತೆಳುವಾದ ವಿಡಂಬನೆಯಲ್ಲಿ, ಮುಕ್ತಿಯ ಘೋಷಣೆಯಲ್ಲಿ ಕರಗಿ ಹೋಗುತ್ತದೆ. ಇದು ಭಕ್ತಿ ಸಾಹಿತ್ಯದ ಮಿತಿಯೂ ಕೂಡ ಆಗಿದೆ. ಮಹತ್ತರವಾದದ್ದನ್ನು ಹೇಳುವ ಸಾಧ್ಯತೆಗಳನ್ನು ಹೊಂದಿದ್ದ ಈ ಕೀರ್ತನೆ, ಸಾಮಾಜಿಕ ಚಿಂತನೆಯ ಕೊರತೆಯಿಂದ, ಭಕ್ತಿ ಭಾವುಕತನದ ಹೆಚ್ಚಳದಿಂದ ನಿಂತಲ್ಲಿಯೇ ನಿಂತುಬಿಡುತ್ತದೆ. ಇದು ಕೇವಲ ಕನಕದಾಸನ ಮಿತಿಯಾಗಿರದೆ ಇಡೀ ಭಕ್ತಿಪಂಥದ ಸಾಹಿತ್ಯದ ಮಿತಿಯಾಗಿದೆ. ಹೀಗಾಗಿ ಇಲ್ಲಿಯ ವಿಡಂಬನೆ ಸಾಮಾಜಿಕವಾಗಿ-ಸಮಾನತೆಗಾಗಿ ಸ್ಫೋಟಗೊಳ್ಳುವ ಬದಲು, ದ್ವಂದ್ವಾತ್ಮಕ ನೆಲೆಯಲ್ಲಿ ನಿಂತು ಮುಕ್ತಿಯ ಆಶಯದಲ್ಲಿ ಕರಗಿ ಹೋಗುತ್ತದೆ. ಪುರಂದರದಾಸರ ಅನೇಕ ಕೀರ್ತನೆಗಳೂ ಕೂಡ ಇದೇ ರೀತಿಯಾಗಿ, ಇಂತಹದೇ ಸೋಲನ್ನನುಭವಿಸುತ್ತವೆ. ಅವು ಪ್ರಮುಖವಾಗಿ ಏನನ್ನು ಹೇಳಲು ಹೊರಟಿರುತ್ತವೋ ಅದನ್ನೇ ಬಿಟ್ಟು ಮತ್ತೊಂದರಲ್ಲಿ ಕರಗಿ ಹೋಗುತ್ತವೆ. ವಚನ ಸಾಹಿತ್ಯದಲ್ಲಿ ಅದರಲ್ಲೂ ಶೂದ್ರವರ್ಗದ ವಚನಕಾರರಲ್ಲಿ ಮಾತ್ರ ಭಕ್ತಿ ಮಾರ್ಗದಲ್ಲಿ ಬೆಳೆದರೂ ಸಾಮಾಜಿಕವಾಗಿ ಸ್ಫೋಟಿಸುವ ಗುಣ ಎದ್ದು ಕಾಣುತ್ತದೆ.

ಆದರೆ ಡಾಂಭಿಕರನ್ನು ವಿಡಂಬಿಸುವಲ್ಲಿ ಪುರಂದರದಾಸರಾಗಲಿ, ಕನಕದಾಸರಾಗಲಿ ಗಮನ ಸೆಳೆಯುತ್ತಾರೆ. ಕೇವಲ ನಾಮ-ವಿಭೂತಿ ಧರಿಸಿ ನಿಜತತ್ವವ ತಿಳಿಯದೇ ಬಡಬಡಿಸುವ ವೇಷಧಾರಿಗಳನ್ನು ಕನಕದಾಸರು ತೀವ್ರವಾಗಿ ವಿಡಂಬಿಸಿದ್ದಾರೆ.

> ಪಟ್ಟೆ ನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು
> ಗುಟ್ಟಿನಲಿ ಜಪಿಸುವ ಗುರುತರಿಯದೆ
> ಕೆಟ್ಟ ಕೂಗನು ಕೂಗಿ ಹೊಟ್ಟೆಯನು ಹೊರೆವಂಥ
> ಹೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣವರೆ?
>
> ಲಿಂಗಾಂಗದೊಳಗಿರುವ ಚಿನುಮಯವ ತಿಳಿಯದೆ
> ಅಂಗಲಿಂಗದ ನೆಲೆಯ ಗುರುತರಿಯದೆ
> ಜಂಗಮಸ್ಥಾವರದ ಹೊಲಬನರಿಯದೆ ಇಂಥ
> ಭಂಗಿ ಮುಕ್ಕಗಳೆಲ್ಲ ಲಿಂಗವಂತರು ಅಹುದೆ?
>
> ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ
> ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ

ಕಳ್ಳಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ
ಕಳ್ಳರಿಗೆ ತಾ ವೀರಸ್ವರ್ಗ ದೊರಕುವುದೆ?

ಮೂಗ್ಹಿಡಿದು ನೀರೊಳಗೆ ಜಪತಪಮಾಡಿ
ಭಾಗವತ ಶಾಸ್ತ್ರಾದಿಗಳನ್ನೆಲ್ಲ ಓದಿ
ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂಥ
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ?

—(ಪುಟ : ೭೨, ಜನಪ್ರಿಯ ಕನಕ ಸಂಪುಟ)

ಇಲ್ಲಿ ಡಾಂಭಿಕ ವೈಷ್ಣವರು, ಲಿಂಗವಂತರು, ಮುಸ್ಲಿಮರು, ಬ್ರಾಹ್ಮಣರು ಇವರ ಬಗೆಗೆ ತೀವ್ರ ವಿಡಂಬನೆಯಿದೆ. ಕನ್ನಡ ಸಾಹಿತ್ಯದಲ್ಲಿ ಬ್ರಾಹ್ಮಣರ-ಲಿಂಗಾಯತರ ಡಾಂಭಿಕತನಕ್ಕೆ ಸಂಬಂಧಿಸಿದ ಟೀಕೆಗಳಿವೆ. ಆದರೆ ಮುಸ್ಲಿಂ ಜನಾಂಗದ ಡಾಂಭಿಕತೆಯ ಬಗೆಗೆ ಇಷ್ಟೊಂದು ತೀವ್ರತರ ವಿಡಂಬನೆ ಕಾಣುವದಿಲ್ಲ. ಇದರಿಂದ ಸ್ಪಷ್ಟವಾಗುವ ಒಂದು ಅಂಶವೆಂದರೆ, ಕನಕದಾಸರು ಎಲ್ಲ ಮತಗಳ ಮತೀಯ ಅಂಶಗಳನ್ನು ಅದರಿಂದ ಹುಟ್ಟುವ ಡಾಂಭಿಕ ಆಚರಣೆಗಳನ್ನು ಬಯಲುಮಾಡುತ್ತಾ ಅಂತರಂಗದಲ್ಲಿರುವ ದೇವರನ್ನು ಭಜಿಸಲು ಕರೆಕೊಡುತ್ತಾರೆ. ಇಂತಹ ಅನೇಕ ಸಂದರ್ಭಗಳಲ್ಲಿ ಕನಕದಾಸರು ಪುರಂದರದಾಸರಿಗಿಂತ ಹೆಚ್ಚು ಸ್ಪಷ್ಟವಾಗುತ್ತಾರೆ. ಕರುಣೆ-ಮಾನವೀಯತೆಯ ಮಹತ್ವವನ್ನು ಸಾರುವ ಈ ಕೀರ್ತನೆಯಲ್ಲಿ ವೇಷಧಾರಿಗಳ ಬಣ್ಣವನ್ನು ಬಯಲುಗೊಳಿಸಿದ್ದಾರೆ.

ಮೋಸದಿ ಜೀವರ ಘಾಸಿ ಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ
ಶ್ರೀಶನ ಭಕುತರ ದೂಷಿಸಿದಾ ಫಲ
ಕಾಸು ಕೊಟ್ಟರೆ ಬಿಟ್ಟೀತೆ
ಭಾಷೆಯ ಕೊಟ್ಟು ನಿರಾಶೆ ಮಾಡಿದಾಫಲ
ಕ್ಲೇಶವಗೊಳಿಸದೆ ಇದ್ದೀತೆ
ಭೂಸುರಸ್ವನ ಹ್ರಾಸಮಾಡಿದ ಫಲ
ಏಸೇಸು ಜನುಮಕು ಬಿಟ್ಟೀತೆ

—(ಪುಟ : ೪೧, ಜನಪ್ರಿಯ ಕನಕ ಸಂಪುಟ)

ಮೋಸಮಾಡಿ ಕಾಶಿಗೆ ಹೋಗುವವರನ್ನು, ಒಳ್ಳೆಯವರನ್ನು ದೂಷಿಸಿ ದಾನ ಮಾಡುವವರನ್ನು, ಭಾಷೆಕೊಟ್ಟು ತಪ್ಪುವವರನ್ನು ಕನಕದಾಸರು ಇಲ್ಲಿ ವಿಡಂಬಿಸಿದ್ದಾರೆ. ಭಕ್ತಿ ಪಂಥದ ಸಾಹಿತ್ಯದಲ್ಲಿ ವ್ಯವಸ್ಥೆಯ ಸುಧಾರಣಾ ಮನೋಭಾವ

ಕಾಣುತ್ತದೆಯೇ ಹೊರತು ವ್ಯವಸ್ಥೆಯ ಸಂಪೂರ್ಣ ಬದಲಾವಣೆಯಲ್ಲ. ಆದಿ ಕೇಶವನನ್ನು ಸ್ಮರಿಸಿದವನಿಗೆ ಮೋಕ್ಷ ತಪ್ಪಿದ್ದಲ್ಲವೆಂದು ಹೇಳುವದಕ್ಕಾಗಿ ಕನಕ ದಾಸರು ಇಷ್ಟೆಲ್ಲಾ ವಿವರಣೆ ಕೊಡುತ್ತಾರೆ. ಸುಧಾರಣಾ ವಾದಿಗಳ ಸಾಹಿತ್ಯದಲ್ಲಿ ಬೋಧನೆ ಪ್ರಧಾನವಾದರೆ ಕ್ರಾಂತಿಕಾರಿಗಳ ಸಾಹಿತ್ಯದಲ್ಲಿ ಚಿಂತನೆ ಪ್ರಧಾನವಾಗಿರು ತ್ತದೆ. ಬೋಧನಾ ಪ್ರಧಾನವಾದ ಅನೇಕ ಕೀರ್ತನೆಗಳನ್ನು ದಾಸರು ರಚಿಸಿದ್ದಾರೆ.

ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು
ಸತತವ್ರತವ ಮಾಡಿ ನೆಂಬ ಹಮ್ಮು ಬೇಡ
ಶ್ರುತಿ ಸ್ಮೃತಿಗಳನ್ನರಿತು ನಡೆವೆನೆನಬೇಡ
ರತಿಪತಿಯ ಶ್ರೀನಾಮವೊಂದೆ ಸಾಕು

ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುವರಿತು ನೀರೊಳಗೆ ಬಿಡದೆ ಮುಳುಗಲು ಬೇಡ
ವನಜಾಕ್ಷನಾಮವೊಂದೇ ಸಾಕು ಮರುಳೆ

—(ಪುಟ : ೯೧, ಜನಪ್ರಿಯ ಕನಕ ಸಂಪುಟ)

ಡಾಂಭಿಕ ಆಚರಣೆಗಳನ್ನು ತಿರಸ್ಕರಿಸಿದ ಈ ಕೀರ್ತನೆಯಲ್ಲಿ ದೇವರ ಸ್ಮರಣೆಯ ಮಹತ್ವ ಹೇಳಿದ್ದಾರೆ. ಡಾಂಭಿಕ ಆಚರಣೆಗಳನ್ನು ತೊರೆದು ದೇವರ ಧ್ಯಾನದಲ್ಲಿ ನಿರತರಾಗುವದೇ ದಾಸರ ಅಂತಿಮ ಗುರಿಯಾಗಿರುವದರಿಂದ ಇಲ್ಲಿಯ ವಿಡಂಬನೆ ಗಳಲ್ಲಿ ಸಮಗ್ರ ಬದಲಾವಣೆಯ ಕಳಕಳಿಯನ್ನು ಕಾಣಲಾಗುವದಿಲ್ಲ. ಸುಧಾರಣಾ ವಾದಕ್ಕಿರುವ ಮಿತಿಗಳ ಹಿನ್ನೆಲೆಯಲ್ಲಿಯೇ ಇಂತಹ ಸಾಹಿತ್ಯವನ್ನು ಅವಲೋಕಿಸ ಬೇಕಾಗುತ್ತದೆ.

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ||

ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರೂ ಬಲ್ಲಿರ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀದೇಹ
ನೆಲೆಯನರಿತು ನೀ ನೆನೆಸಂಡ್ಯ ಮನುಜ ||

—(ಪುಟ : ೨೫–೨೬, ಜನಪ್ರಿಯ ಕನಕ ಸಂಪುಟ)

ಇದು ಕನಕದಾಸರ ಪ್ರಸಿದ್ಧ ಕೀರ್ತನೆ. ಸತ್ಯವಂತ ಜನಕ್ಕೆ ಯಾವ ಕುಲವೂ ಇಲ್ಲವೆಂದು ಸಾರುವ ಈ ಕೀರ್ತನೆಯಲ್ಲಿ ಕನಕದಾಸರ ಸ್ವಾನುಭವ ಜಾಗೃತವಾಗಿದೆ. ಹಸುವಿನ ಮಾಂಸದಲ್ಲಿ ಹುಟ್ಟುವ ಹಾಲು, ಮೃಗಗಳ ಮೈಯಲ್ಲಿ ಹುಟ್ಟುವ ಕಸ್ತೂರಿ —ಇವುಗಳ ಮಹತ್ವವನ್ನು ಹೇಳುತ್ತ ಕೆಸರಲ್ಲಿ ಹುಟ್ಟಿದ ತಾವರೆಯ ಪರಿಮಳವನ್ನು ಬಣ್ಣಿಸುತ್ತ ಇಲ್ಲಿ ಕುಲದ ನೆಲೆಯನ್ನು ಬಿಡಿಸಿ ತೋರಿಸಿದ್ದಾರೆ. ಪುರಂದರದಾಸರ ಕೀರ್ತನೆಯಲ್ಲಿಯೂ ಕೂಡ ಈ ಕುಲದ ಬಗೆಗೆ ಪ್ರಸ್ತಾಪ ಬರುತ್ತದೆ. "ಹೊಲೆಯ ಊರ್ಹೊರಗೆ ಇಹನೆ, ಊರೊಳಗಿಲ್ಲವೆ?" ಎಂಬ ಪ್ರಶ್ನೆಯ ಮೂಲಕ ಪ್ರಾರಂಭವಾಗುವ ಆ ಕೀರ್ತನೆಯಲ್ಲಿ ನಿಜವಾದ ಹೊಲೆತನ ಯಾವುದೆಂಬುದನ್ನು ತಿಳಿಸಿದರೆ ಇಲ್ಲಿ ಕನಕದಾಸರು ನಿಜವಾದ ಕುಲ ಯಾವುದೆಂಬುದನ್ನು ಸ್ಪಷ್ಟಪಡಿಸಿದ್ದಾರೆ. "ಜಲದ ಕುಲವನೇನಾದರೂ ಬಲ್ಲಿರ?"—ಎನ್ನುವಂತಹ ಪ್ರಶ್ನೆ ಈ ಸಮಾಜ ವ್ಯವಸ್ಥೆಗೆ ಒಡ್ಡಿದ ದೊಡ್ಡ ಸವಾಲಾಗುತ್ತದೆ. ಕುಲವೇ ಪ್ರಧಾನವಾಗಿದ್ದ ಸಂದರ್ಭದಲ್ಲಿ ಬಾಳಿ-ಬದುಕಿದ ಕನಕದಾಸರು ಅಂದಿನ ಸಂದರ್ಭದಲ್ಲಿಯೇ ಸಮಾನತೆಗಾಗಿ ಹಾತೊರೆದದ್ದು ಪ್ರಮುಖ ಅಂಶವಾಗುತ್ತದೆ.

> ಗುಂಡು ಮುಳುಗಿನ ಹಕ್ಕಿಯಂತೆ ಕಂಡಕಂಡ ನೀರ ಮುಳುಗಿ
> ಮಂಡೆ ಶೂಲೆ ಬಾಹುದೈಸೆಗತಿಯ ಕಾಣೆನೊ
> ಮಂಡೂಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು
> ಮುಂಡಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ ||
>
> ಗಾಣದೆತ್ತಿನಂತೆ ಕಣ್ಣುಮುಚ್ಚಿ ಪ್ರದಕ್ಷಿಣೆ ಮಾಡಿ
> ಕಾಣದೆ ತಿರುಗುವೆನೆಂದು ಕಣ್ಣಿದ್ದು ನಾನು
> ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ
> ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ ||
>
> —(ಪುಟ : ೬೪, ಜನಪ್ರಿಯ ಕನಕ ಸಂಪುಟ)

ಈ ಕೀರ್ತನೆಯಲ್ಲಿ ಆತ್ಮಶೋಧನೆಯ ಜತೆಗೆ ಸಾಮಾಜಿಕ ವಿಮರ್ಶೆಯಡಗಿದೆ. ಇಲ್ಲಿ ಬರುವ ಪ್ರಥಮ ಪುರುಷ 'ನಾನು' ಈ ಸಮಾಜವ್ಯವಸ್ಥೆಯ ಪ್ರತೀಕವಾಗಿದೆ.

"ಮಸಿಯನೇಸುಕಾಲ ಬೆಳಗಿದರೆ ಬಿಳಿದಾಗಬಲ್ಲುದಯ್ಯ" "ಇಕ್ಕಳಕ್ಕೈಮುಗಿದರೆ ಶಿವಭಕ್ತನಾಗಬಲ್ಲುದೆ"—ಎಂಬಂತಹ ಬಸವಣ್ಣನವರ ವಚನಗಳನ್ನು ಈ ಕೀರ್ತನೆ ನೆನಪಿಗೆ ತರುತ್ತದೆ. ಭಕ್ತಿ ಪಂಥದ ಸಾಹಿತ್ಯದಲ್ಲಿ ಈ ಆತ್ಮಶೋಧನೆಗೆ ಬಹಳ ಮಹತ್ವವಿದೆ. ಇಲ್ಲಿಯ ಭಕ್ತ ತನ್ನ ಮೂಲಕ, ತನ್ನ ಸುತ್ತಣ ಸಮಾಜದ ಚಿತ್ರಣವನ್ನು ಚಿತ್ರಿಸಲು ಪ್ರಯತ್ನಿಸುತ್ತಿರುತ್ತಾನೆ. ಕನಕದಾಸರೂ ಕೂಡ ಈ ಕೀರ್ತನೆಯಲ್ಲಿ 'ಭಕ್ತಿ ತನ್ನಲ್ಲಿ ಎಳ್ಳುಕಾಳಿನಷ್ಟೂ ಇಲ್ಲ' ಎಂದು ಹೇಳುತ್ತಲೇ,

ಭಕ್ತಿಯು ನಿಧಿಯಂತೆ, ಅದರ ಹುಡುಕಾಟದ ಫಲದಂತೆ ಕಾಣಿಸುತ್ತಾರೆ. ಜ್ಞಾನ ಅಥವಾ ಚಿಂತನೆ ನಾಗರಿಕ ಜಗತ್ತಿನ ಕೊಡುಗೆಯಾದರೆ; ಭಕ್ತಿ ಅನಾಗರಿಕ ಜಗತ್ತಿನಿಂದಲೇ ಬಂದಂತಹದ್ದಾಗಿದೆ. ಹೀಗಾಗಿ ಜ್ಞಾನಕ್ಕಿಂತ ಭಕ್ತಿಗೆ ಈ ಸಮಾಜ ವ್ಯವಸ್ಥೆಯಲ್ಲಿ ದೊಡ್ಡದಾದ ಪರಂಪರೆಯಿದೆ. ಹೀಗಾಗಿ ಭಕ್ತಿ ಹೆಚ್ಚು ಮೂಲಭೂತವಾಗಿ ಕಾಣುತ್ತದೆ ಮತ್ತು ಕಾಡುತ್ತದೆ. ಜ್ಞಾನ ಅಥವಾ ಚಿಂತನೆಯಿಂದ ಸಾಮಾಜಿಕ ಸಮಾನತೆ ದೊರೆತರೆ, ಭಕ್ತಿಯಿಂದ ಆಧ್ಯಾತ್ಮಿಕ ಸಮಾನತೆ ದೊರೆಯುತ್ತದೆ. ಹೀಗಾಗಿ ಭಕ್ತಿಪಂಥದ ಸಾಹಿತ್ಯದಲ್ಲಿ ಆರ್ಥಿಕ-ಸಾಮಾಜಿಕ ಸಮಾನತೆಗಿಂತ, ಆಧ್ಯಾತ್ಮಿಕ-ಧಾರ್ಮಿಕ ಸಮಾನತೆಗಳು ಹೆಚ್ಚು ಮುಖ್ಯವಾಗುತ್ತವೆ.

ಕನಕದಾಸರ ಕೀರ್ತನೆಗಳಲ್ಲಿ ಕಲ್ಪಕತೆ. (ಯಾಕೆ ನೀನಿಲ್ಲಿ ಮವಡಿಸಿದೆ ಹರಿಯೆ) ಶ್ರದ್ಧೆ (ತಲ್ಲಣಿಸದಿರು ಕಂಡ್ಯ ತಾಳು ಮನವೆ), ಭಕ್ತಿ (ದೇವ ರಕ್ಷಿಸು ನಮ್ಮನನವರತ) ಆಧ್ಯಾತ್ಮ (ನಾವು ಕುರುಡರು) ಈ ಭಾವಗಳ ಜತೆಗೆ ವ್ಯಂಗ್ಯ-ವಿಡಂಬನೆ, ವಿಷಾದ-ಆಶ್ಚರ್ಯ ಭಾವನೆಗಳೂ ಸೇರಿವೆ.

ಇವರ ಭಾಷಾ ಶೈಲಿ ಸರಳವೂ, ಸ್ಪಷ್ಟವೂ ಹಾಗೂ ಪರಿಣಾಮಕಾರಿಯೂ ಆಗಿದೆ. ಪೂರ್ವಕವಿಗಳ ಕಾವ್ಯಾಭ್ಯಾಸದಿಂದ ಬಂದ ಪ್ರೌಢ ಭಾಷೆ ಮತ್ತು ಹುಟ್ಟಿದ ಪರಿಸರದೊಂದಿಗೆ ಬೆಳೆದು ಬಂದ ದೇಸೀ ಭಾಷೆ ಇವೆರಡೂ ಕನಕದಾಸರ ಕೀರ್ತನೆಗಳಲ್ಲಿ ಮೇಳೈಸಿವೆ. 'ಜೇವೀ ನಮ್ಮ ದ್ಯಾವರು ಬಂದಾರು ಬನ್ನಿರೆ' ಮತ್ತು 'ಆತ ನೊಲಿದ ಮ್ಯಾಲೆ ಯಾತರ ಕುಲವಯ್ಯ' ಎನ್ನುವ ಕೀರ್ತನೆಗಳಲ್ಲಿ ಈ ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ.

ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಾಂಶ, ಆಡುಮಾತು, ವಿಡಂಬನೆಯ ಜತೆಗೆ ಅಲ್ಲಲ್ಲಿ ವೈಚಾರಿಕ ನಿಲುವೂ ಎದ್ದುಕಾಣುತ್ತದೆ. ಇದು ಕನಕದಾಸರ ವೈಶಿಷ್ಟ್ಯ ಗುಣ ಕೂಡಾ ಆಗಿದೆ. ಕನಕದಾಸರ 'ರಾಮಧಾನ್ಯಚರಿತ್ರೆ' ಕೃತಿಯಲ್ಲಿ ಕಾಣುವ ವೈಚಾರಿಕತೆ ಅವರ ಕೀರ್ತನೆಗಳಲ್ಲಿ ಅಷ್ಟಾಗಿ ಎದ್ದುಕಾಣುವದಿಲ್ಲವಾದರೂ ಇವರು ದಾಸಪರಂಪರೆಯಲ್ಲಿಯೇ ಎದ್ದುಕಾಣುವ ಕೀರ್ತನಕಾರರಾಗುತ್ತಲೇ ಗಮನ ಸೆಳೆಯುತ್ತಾರೆ.

ಪುರಂದರದಾಸರ ಕೀರ್ತನೆಗಳಲ್ಲಿ ವೈವಿಧ್ಯತೆ ಇದ್ದರೆ, ಕನಕದಾಸರ ಕೀರ್ತನೆಗಳಲ್ಲಿ ವೈಶಿಷ್ಟ್ಯತೆ ಇದೆ. ಪುರಂದರದಾಸರು ಕೀರ್ತನೆಗಳ ಜತೆಗೆ ಸುಳಾದಿ, ಉಗಾಭೋಗಗಳನ್ನು ರಚಿಸಿದರೆ; ಕೀರ್ತನಸಾಹಿತ್ಯಕ್ಕೆ ತುಂಬಾ ವಿಶಿಷ್ಟವಾಗಿರುವ ಮುಂಡಿಗೆಗಳನ್ನು ಕನಕದಾಸರು ರಚಿಸಿದ್ದಾರೆ. ಪುರಂದರರ ಅನೇಕ ಕೀರ್ತನೆಗಳು ತುಂಬಾ ವಾಚ್ಯವಾಗಿ ಕಂಡರೆ, ಕನಕದಾಸರ ಕೀರ್ತನೆಗಳು ಸೂಚ್ಯವಾಗಿವೆ. ಅನುಭಾವ-ಸ್ತ್ರೀಬೋಧೆ ಇಬ್ಬರ ಕೀರ್ತನೆಗಳಲ್ಲಿಯೂ ಕಾಣುತ್ತವೆ. ಸಾಮಾಜಿಕ ವಿಡಂಬನೆಯು ಸಂದರ್ಭದಲ್ಲ ಪುರಂದರದಾಸರು ಸೂಕ್ಷ್ಮವಾಗಿ ಹೇಳಿದರೆ; ಕನಕದಾಸರು ಸ್ಪಷ್ಟವಾಗಿ ಹೇಳುತ್ತಾರೆ. ಕನಕದಾಸರ ಅನೇಕ ಕೀರ್ತನೆಗಳಲ್ಲಿ

ನಿಷ್ಠುರತೆಯ ಗುಣ ಎದ್ದು ಕಾಣುತ್ತದೆ. ಪುರಂದರದಾಸರು ಮಾಧ್ವಮತ್ರದ ಪ್ರಚಾರಕರಂತೆ ಕಂಡರೆ, ಕನಕದಾಸರು ಎಲ್ಲ ಮತದ ದೇವರುಗಳನ್ನು ಸ್ತುತಿಸುತ್ತಲೇ ಮಾನವತಾವಾದಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆಯಿದ್ದರೂ ಪ್ರಮುಖವಾಗಿ ಭಕ್ತಿಯೇ ಪ್ರಧಾನವಾಗಿದೆ. ಆದರೆ ಅವರ ರಾಮಧ್ಯಾನ್ಯ ಚರಿತ್ರೆಯಲ್ಲಿ ಸಂಪೂರ್ಣ ಮುಕ್ತ ಚರ್ಚೆ ಇದೆ. ರಾಗಿ ಮತ್ತು ಭತ್ತದಂತಹ ಆಹಾರ ಧಾನ್ಯಗಳ ಮೂಲಕ ಶ್ರೀಮಂತ-ಬಡವರ ನಡು ವಿರುವ ಅಂತರವನ್ನು ಶ್ರಮಜೀವಿಗಳಾದ ಬಡವರ ಅದಮ್ಯಶಕ್ತಿಯ ಮಹತ್ವ ವನ್ನು ಅಲ್ಲಿ ಸ್ಪಷ್ಟಪಡಿಸಿದ್ದಾರೆ.

ಇವರು ರಚಿಸಿರುವ ಇಪ್ಪತ್ತೈದು ಮುಂಡಿಗೆಗಳು ಅಲ್ಲಮಪ್ರಭುವಿನ ಬೆಡಗಿನ ವಚನಗಳನ್ನು ನೆನಪಿಗೆ ತರುತ್ತವೆ. ದಾಸಕೂಟದಲ್ಲಿಯೇ ಉಳಿದ ದಾಸರು ರಚಿಸ ಲಾಗದ ಮುಂಡಿಗೆಗಳನ್ನು ಕನಕದಾಸರೇ ಏಕೆ ರಚಿಸಿದರು? ಎಂಬುದು ಪ್ರಮುಖ ವಿಷಯವಾಗುತ್ತದೆ. ಶತಮಾನಗಳಿಂದ ಸಾಂಸ್ಕೃತಿಕವಾಗಿ-ಶೈಕ್ಷಣಿಕವಾಗಿ ವಂಚಿತ ರಾಗಿದ್ದ ಕುರುಬ ಜನಾಂಗದಲ್ಲಿ ಹುಟ್ಟಿಬಂದ ಕನಕದಾಸರಂತಹವರು ಪಾಂಡಿತ್ಯ ಪ್ರಧಾನವಾದ-ಅನುಭಾವಪೂರ್ಣವಾದ ಕೃತಿ ರಚನೆಗೆ ಹಾತೊರೆಯುವರು ಅವರ ಶತಮಾನಗಳ ಸಾಂಸ್ಕೃತಿಕ ಹಸಿವಿನ ಪ್ರತೀಕವಾಗಿದೆ. ಕೇವಲ ರಗಳೆಗಳನ್ನು ಬರೆದ ಹರಿಹರ ಕವಿಗೆ ರಗಳೆಕವಿಯೆಂಬ ಪಟ್ಟ ಕಟ್ಟಿದಾಗ ಕಬ್ಬಿಣದ ಕಡಲೆಯೆಂದು ತಿಳಿದು ಕೊಂಡಿದ್ದ ಚಂಪೂಪ್ರಕಾರದಲ್ಲಿ ತಾನೂ ಬರೆದು ತನ್ನ ಪ್ರತಿಭೆಯನ್ನು ತೋರಿಸಲು, ಹರಿಹರ ಗಿರಿಜಾಕಲ್ಯಾಣ ಬರೆದಂತೆ, ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಕುವೆಂಪು ಸಂಸ್ಕೃತಭೂಯಿಷ್ಟವಾದ 'ರಾಮಾಯಣ ದರ್ಶನಂ' ರಚಿಸಿದಂತೆ, ಕನಕ ದಾಸರು ಅಂದಿನ ಸಮಾಜದ ಉಚ್ಚವರ್ಗದವರ ಟೀಕೆಗೆ ಉತ್ತರವಾಗಿ ಈ ಮುಂಡಿಗೆ ಗಳನ್ನು ರಚಿಸಿರಬೇಕೆನಿಸುತ್ತದೆ. ದಾಸರ ಸುಳಾದಿ ಉಗಾಭೋಗಗಳಿಗೆ ಸಂಬಂಧಿ ಸಿದಂತೆ ಚರ್ಚೆ ನಡೆದಿದೆ. ಆದರೆ ಕನಕದಾಸರ ಮುಂಡಿಗೆಗಳ ಬಗೆಗೆ ಇದುವರೆಗೆ ಚರ್ಚೆ ನಡೆದಿಲ್ಲ. ಅಂದಿನ ಚಾರಿತ್ರಿಕ ಸಂದರ್ಭದ ಹಿನ್ನೆಲೆಯಲ್ಲಿ ಈ ಮುಂಡಿಗೆ ಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಈ ಹಿನ್ನೆಲೆಯಲ್ಲಿ ದಾಸಸಾಹಿತ್ಯವನ್ನು ಹೊಸ ದೃಷ್ಟಿಕೋನದಿಂದ ನೋಡುವದರ ಮೂಲಕ ಕನಕದಾಸರ ಸಾಧನೆಗಳನ್ನು ಗುರುತಿಸಬಹುದಾಗಿದೆ.

ವಚನಕಾರರಂತೆ ಮೂಲಭೂತವಾಗಿ ವೈದಿಕ ಸಂಸ್ಕೃತಿಯನ್ನು ಅದರ ಕರ್ಮ ಸಿದ್ಧಾಂತವನ್ನು ದಾಸರಲ್ಲಿ ಯಾರೂ ಆಮೂಲಾಗ್ರವಾಗಿ ವಿರೋಧಿಸುವದಿಲ್ಲ. ಅಲ್ಲಿಯ ದಶಾವಾತಾರದ ಕಲ್ಪನೆಗಳ ವಿರುದ್ಧ ಪ್ರತಿಭಟಿಸುವದಿಲ್ಲ. ಅಂದಿನ ಸಾಮಾ ಜಿಕ ವ್ಯವಸ್ಥೆಯಲ್ಲಿ ಸಮಾನತೆಯನ್ನು ತರಲು ಸೈದ್ಧಾಂತಿಕವಾಗಿ ಎಲ್ಲಿಯೂ ಪ್ರಯತ್ನಿಸುವದಿಲ್ಲ. ಹೀಗಾಗಿ ವಚನಕಾರರಿಗೂ-ಹರಿದಾಸರಿಗೂ ತುಂಬಾ ವ್ಯತ್ಯಾಸ ವಿದೆ. ಆದರೆ ಅವರವರ ಸಂದರ್ಭದ ಇತಿ-ಮಿತಿಗಳಲ್ಲಿಯೇ ಅವರ ಸಾಧನೆಯನ್ನು

ಮೆಚ್ಚಿಕೊಳ್ಳಬಹುದಾಗಿದೆ. ವಚನಕಾರರಲ್ಲಿ ಶೂದ್ರವರ್ಗದವರು-ದಲಿತರು ಪ್ರಧಾನವಾಗಿದ್ದು ಹೆಚ್ಚು ಸಂಖ್ಯೆಯಲ್ಲಿ ಕಂಡು ಬಂದರೆ, ಕೀರ್ತನಕಾರರಲ್ಲಿ ಕನಕದಾಸನೊಬ್ಬನನ್ನು ಬಿಟ್ಟರೆ ಬೇರೆ ಯಾರೂ ನೋವಿನ ಜನಾಂಗದಿಂದ ಬಂದ ಜನರಿಲ್ಲ. ಕನಕದಾಸನ ಪ್ರವೇಶವೂ ಕೂಡ ತುಂಬಾ ಆಕಸ್ಮಿಕವಾಗಿದೆ. ವ್ಯಾಸರಾಯರು ಪುರಂದರದಾಸರು ಅವಕಾಶ ಕೊಡದಿದ್ದರೆ ಕನಕದಾಸ ಕೀರ್ತನಕಾರರಾಗುತ್ತಿರಲಿಲ್ಲ ಮತ್ತು ದಾಸಕೂಟದಲ್ಲಿ ಸೇರುತ್ತಿರಲಿಲ್ಲ. ಆದರೆ ದಾಸಕೂಟದ ಸಹಾಯವಿಲ್ಲದೆಯೇ ಕನಕದಾಸ ಒಬ್ಬ ಪ್ರಮುಖ ಕವಿಯಾಗಿ ಬೆಳೆದು ನಿಲ್ಲುತ್ತಿದ್ದರೆಂಬುದು ಸ್ಪಷ್ಟ. ಇದಕ್ಕೆ ಆತನ ಕಾವ್ಯ ಕೃತಿಗಳೇ ನಿಚ್ಚಳ ಉದಾಹರಣೆಯಾಗಿದೆ. ಕನಕದಾಸ ದಾಸಕೂಟ ಸೇರಿದ್ದರಿಂದಲೇ ಆತನಿಗೆ ದಶಾವಾತಾರಗಳ ಕಲ್ಪನೆಯಿಂದ ಹೊರಬರಲಾಗಲಿಲ್ಲ. ಧರ್ಮ-ಕರ್ಮಗಳಿಂದ ಬಿಡಿಸಿಕೊಳ್ಳುವದಾಗಲಿಲ್ಲ. ಹಣೆಬರಹ, ಚತುರ್ವರ್ಣ ಪದ್ಧತಿಯಿಂದ ತಪ್ಪಿಸಿಕೊಳ್ಳುವದಾಗಲಿಲ್ಲ. ಹೀಗಾಗಿ ಕನಕದಾಸ ದಾಸಕೂಟ ಸೇರುವದರೊಂದಿಗೆ ಅನೇಕ ರೀತಿಯ ಸ್ವಾತಂತ್ರ್ಯವನ್ನು ಕಳೆದುಕೊಂಡ. ಈ ದ್ವಂದ್ವಸ್ಥಿತಿ ಆತನ ಅನೇಕ ಕೀರ್ತನಗಳಲ್ಲಿ ಎದ್ದು ಕಾಣುತ್ತದೆ. ಆದರೆ ಕನಕದಾಸನ ಪ್ರವೇಶದ ಮೂಲಕ ದಾಸಕೂಟಕ್ಕೆ ಒಂದು ಕಳೆ ಬಂತು. ತಾವೂ ಕೂಡ ಸಮಾನತೆಯನ್ನು ಸಾಧಿಸಿದ್ದೇವೆಂದು ಹೇಳಲು ಒಂದು ಸಾಕ್ಷಿ ಸಿಕ್ಕಂತಾಯಿತು. ಆದರೆ ಇವೆಲ್ಲವುಗಳನ್ನೂ, ಮೀರಿ ಕನಕದಾಸ ಬೆಳೆದು ನಿಂತಿರುವದು ಮುಖ್ಯ. ಇವತ್ತಿನ ಪ್ರಸ್ತುತ ಬದುಕಿಗೂ ಆತನ ಆಲೋಚನಾಕ್ರಮ, ಪ್ರಾಮಾಣಿಕತೆ, ಸ್ಪಷ್ಟತೆ, ಕಲಾತ್ಮಕ ಗುಣ ಇವೆಲ್ಲಾ ತುಂಬಾ ಅನಿವಾರ್ಯವಾಗುತ್ತವೆ. ಕೀರ್ತನ ಸಾಹಿತ್ಯದ ಹಿನ್ನೆಲೆಯಲ್ಲಿ ಕನಕದಾಸ ಒಬ್ಬ ಕಾಲಜ್ಞಾನಿಯಂತೆ, ಒಬ್ಬ ಅನುಭಾವಿಯಂತೆ, ಮಹಾಮಾನವತಾವಾದಿಯಂತೆ ಕಾಣುತ್ತಾನೆ.

---

೨೨–೩–೧೯೮೯ರಂದು ಬೆಂಗಳೂರು ವಿಶ್ವವಿದ್ಯಾಲಯವು ಬೆಂಗಳೂರಿನಲ್ಲಿ ಏರ್ಪಡಿಸಿದ, 'ಕನಕದಾಸ ವಿಚಾರ ಸಂಕಿರಣ'ದಲ್ಲಿ ಮಂಡಿಸಿದ ಪ್ರಬಂಧ.

# ಕನ್ನಡ ಶ್ರೀಕೃಷ್ಣಕಾವ್ಯದಲ್ಲಿ ಒಬ್ಬಳು 'ಹೊಸಬಿ'

## ಶ್ರೀ ಪು. ತಿ. ನ. ಅವರು ಚಿತ್ರಿಸಿದ ರಾಧೆಯನ್ನು ಕುರಿತ ಚಿಂತನೆ

---

ಡಾ|| ಎ. ಎಸ್. ವೇಣುಗೋಪಾಲ ರಾವ್

ಭಾರತೀಯ ಭಾವಜೀವನವನ್ನು ಇಷ್ಟು ಗಾಢವಾಗಿ ತನ್ನ ಮೃದು ಮಧುರ ಲಾಸ್ಯದಿಂದ ಆವರಿಸಿ ಬಿಟ್ಟ ಈ ಹುಡುಗಿ ಯಾರು? ಇವಳು ರಾಧೆ. ಬೃಂದಾವನದ ಅಧಿದೇವಿ. ಹರಿಹೃದಯೋಲ್ಲಾಸಿನಿ. ಅವಳನ್ನು ಅರಿಯದ ಭಾವುಕನಾರು ಈ ನಾಡಿನಲ್ಲಿ? ಆದರೆ ಅವಳು ತನ್ನ ಇನಿಯನಷ್ಟು ಪ್ರಾಚೀನೆಯೇನಲ್ಲ. ಕೃಷ್ಣ ಕಾವ್ಯಗಳ ಮೂಲ ವ್ಯಾಸರಚಿತ ಭಾಗವತವಷ್ಟೆ! ಆದರೆ ಅಲ್ಲಿ ಎಲ್ಲಿದ್ದಾಳೆ ಈ ರಾಧೆ? ಗೋಪ-ಗೋಪಿಯರುಂಟು. ಕೃಷ್ಣನ ವಿಶೇಷ ಪ್ರೀತಿಗೆ ಪಾತ್ರಳಾದ 'ಯಾವಳೋ' ಉಂಟು. ಅವಳನ್ನು ನೆನೆದು ಕರುಬೂ ಉಂಟು ಉಳಿದ ಗೋಪಿಯರಿಗೆ. ಅವಳೆಂದೂ ರಾಧೆಯಲ್ಲ. ದಶಮಸ್ಕಂಧದ ಮೂವತ್ತನೆ ಅಧ್ಯಾಯದಲ್ಲಿ ಗೋಪಿಯರು ಕೃಷ್ಣನನ್ನು ಹುಡುಕುತ್ತಾ ಅಲೆಯುವಾಗ "ತಸ್ಯಾ ಅಮೂನಿ ನಃ ಕ್ಷೋಭಂ ಕುರ್ವಂತಿ ಉಚ್ಚೈಃ ಪದಾನಿ ಯತ್" ಎಂಬ ಬಣ್ಣನೆಯಿದೆ. ಅವಳೊಬ್ಬಳ ಹೆಜ್ಜೆಗುರುತು ನಮ್ಮನ್ನು ಕಲಕಿಬಿಡುತ್ತಿದೆ. ಪ್ರೇಯಸಿಯೊಡನೆ ಕೃಷ್ಣ ಇಲ್ಲಿ ನಡೆದಿರಬೇಕು. ಇಗೋ ಇಲ್ಲಿ ಅವಳ ಹೆಜ್ಜೆಗುರುತು ಕಾಣದು. ಅವನು ಅವಳನ್ನು ಎತ್ತಿಕೊಂಡಿರಬೇಕು; ಆ ಕಾಮಿಯ ಹೆಜ್ಜೆಯೂರಿ ನೋಡಿ ಹೇಗೆ ಹಳ್ಳವಾಗಿದೆ ಇಲ್ಲಿ. ಅವಳ ಭಾರವೇ ಇದ್ದೀತು! ಆಗೋ ಅಲ್ಲಿ ಮತ್ತೆ ಅವಳ ಹೆಜ್ಜೆ. ಹೂ ಕೊಯ್ಯಲು ಕೃಷ್ಣ ಇಲ್ಲಿ ಇಳಿಸಿರಬೇಕು. ತುದಿಗಾಲು ಊರಿದ ಕೃಷ್ಣನ ಹೆಜ್ಜೆ ಇದು. ಇದು ಮಂಡಿಯ ಗುರುತು—ಹೂ ಮುಡಿಸಿರಬೇಕು ಅವನು....ಹೀಗೆಲ್ಲ ಬಗೆಬಗೆಯಾಗಿ ಹಲುಬಿ ವಿಹ್ವಲರಾಗಿಬಿಡುತ್ತಾರೆ. ಈ ಗೋಪಿಯರ ಮನಸ್ಸನ್ನು ಕಲಕಿದವಳು ಯಾರೋ? ರಾಧೆಯೆಂಬ ಹೆಸರಂತೂ ಇಲ್ಲ. ಗೋಕುಲ ನಿರ್ಗಮನದ ಸನ್ನಿವೇಶದಲ್ಲಾಗಲೀ ರಾಸಕ್ರೀಡೆಯಲ್ಲಾಗಲೀ ಅವಳ ಪ್ರಸ್ತಾಪವೂ ಇಲ್ಲ. ಕೃಷ್ಣ ಕಥೆಯನ್ನು ಸವಿಸ್ತಾರವಾಗಿ ನಿರೂಪಿಸುವ ಹರಿವಂಶದಲ್ಲೂ ಹಾಗೆಯೇ. ಮಹಾ

ಭಾರತಕಾರನಿಗೆ ತಿಳಿದದ್ದು ಗೋಪಿಯರ ಕಥೆ—ರಾಧಾ ವೃತ್ತಾಂತವಲ್ಲ. ಭಾಗವತ ರಚನೆ ದಕ್ಷಿಣ ಭಾರತದಲ್ಲಾಯಿತು ಎಂಬ ಐತಿಹ್ಯವನ್ನು ನಂಬುವುದಾದರೂ ರಾಧೆ ದಾಕ್ಷಿಣಾತ್ಯರಿಗೆ ಪೂರ್ಣ ಪರಿಚಯವಿರಲಿಲ್ಲ!

ಜಯದೇವನ ಗೀತಗೋವಿಂದದ ರಾಧೆಯೇ ಭಾರತೀಯರಿಗೆ ಅತ್ಯಂತ ಪರಿಚಿತಳು. ಆದರೆ ಹನ್ನೆರಡನೆ ಶತಮಾನದಲ್ಲಿ ರಚಿತವಾದ ಈ ಚಿರಸುಂದರ ಕಾವ್ಯಕ್ಕೂ ಮೊದಲು ಆಕೆ ಅಲ್ಲಲ್ಲಿ ಸುಳಿದಾಡಿರುವುದು ನಿಜ. ಗೋವರ್ಧನ ಕವಿಯ ಆರ್ಯಾಸಪ್ತಶತಿಯಲ್ಲಿ ಅವಳ ಉಲ್ಲೇಖವುಂಟು. ಈತ ಜಯದೇವನಿಗೂ ಹಿರಿಯ ಕವಿ. ಪ್ರಾಯಶಃ ಅವನ ಸಮಕಾಲೀನ (ಕ್ರಿ.ಶ. ೧೧೮೦). ಗಮನಿಸಿ:

ಮಧುಮಥನ ಮೌಲಿಮಾಲೇ ಸಖಿ ತುಲಯಸಿ ತುಲಸಿ ಕಿಂ
ಮುಧಾ ರಾಧಾಮ್
ಯತ್ತವ ಪದಮುದಸೀಯಂ ಸುರಭಯಿತುಂ ಸೌರಭೋದ್ಭೇದಃ ||
(V ೪೩೧)

ರಾಜ್ಯಾಭಿಷೇಕ ಸಲಿಲ ಕ್ಷಲಿತ ಮೌಲೇಃ ಕಥಾಸು ಕೃಷ್ಣಸ್ಯ
ಗರ್ವಭರ ಮಂದರಾಕ್ಷೀ ಪಶ್ಯತಿ ಪದ ಪಂಕಜಂ ರಾಧಾ ||
(V ೪೮೬)

ಇತ್ಯಾದಿ.

ರಾಮಚಂದ್ರ ಹಾಗೂ ಗುಣಚಂದ್ರ ವಿರಚಿತ 'ನಾಟ್ಯದರ್ಪಣ' ಕ್ರಿ. ಶ. ೧೧೭೫ಕ್ಕೆ ಮೊದಲು ರಚಿತವಾದದ್ದು. ವಿಪ್ರಲಂಭ ಶೃಂಗಾರವನ್ನು ವರ್ಣಿಸುವಲ್ಲಿ ರಾಧೆಯ ಪ್ರಸ್ತಾಪವುಂಟು (ಭಾಗ ೧, ಪುಟ ೧೧೬). ಸುಮಾರು ಇದೇ ಕಾಲದ (ಕ್ರಿ.ಶ. ೧೧೭೦) ಶ್ರೀಹರ್ಷನ ನೈಷಧೀಯ ಚರಿತೆಯಲ್ಲಿಯೂ 'ಪ್ರಾಣವತ್ ಪ್ರಣಯಿ ರಾಧಾ' ಎಂಬ ಪ್ರಸ್ತಾಪ ೨೧ನೇ ಅಧ್ಯಾಯ—ಪದ್ಯ ೪೪ರಲ್ಲಿ ಉಂಟು.

ಹೇಮಚಂದ್ರನ ಕಾವ್ಯಾನುಶಾಸನ (ಕ್ರಿ.ಶ. ೧೦೪೪)ರಲ್ಲಿಯೂ ಎರಡು ಶ್ಲೋಕಗಳಲ್ಲಿ (೧೦೭–೧೧೦) ರಾಧೆಯ ಉಲ್ಲೇಖ ಉಂಟು. ಕ್ಷೇಮೇಂದ್ರನ ದಶಾವತಾರ ಚರಿತ (ಕ್ರಿ.ಶ. ೧೦೬೬, ಅಧ್ಯಾಯ ೪). ರಾಧಾಚುಂಬಿತ ಕೃಷ್ಣನನ್ನು ಸ್ಮರಿಸುತ್ತದೆ—ಸಾಕಷ್ಟು ವಿಸ್ತಾರದ ನಿರೂಪಣೆಯೇ ಇದೆ.

ಭೋಜನ ಸರಸ್ವತೀ ಕಂಠಾಭರಣ ಇನ್ನೂ ಪ್ರಾಚೀನವಷ್ಟೆ! (ಕ್ರಿ.ಶ. ೧೦೦೫) ಅಲ್ಲಿಯ ಎರಡನೆ ಅಧ್ಯಾಯದಲ್ಲಿ—"ಕುಶಲಂ ರಾಧೇ ಸುಖಿತೋಸಿ ಕಂಸಃ ಕಂಸಃ ಕ್ವನು ಸಾ ರಾಧಾ" ಇತ್ಯಾದಿ ಪ್ರಶ್ನಿಸುವ ಮಧುರಹಾಸದ ಕೃಷ್ಣನ ಚಿತ್ರಣ ಉಂಟು.

ಧನಿಕನ ದಶರೂಪಕ, ಕುಂತಕನ ವಕ್ರೋಕ್ತಿ ಜೀವಿತ, ಅಭಿನವ ಗುಪ್ತನ ಧ್ವನ್ಯಾಲೋಕ–ಲೋಚನ ಸಾರ, ಯಶಸ್ತಿಲಕ ಚಂಪೂ, ನಲಚಂಪೂ, ರಾಜ

ಶೇಖರನ ಕಾವ್ಯಮೀಮಾಂಸಾ, ಭಟ್ಟನಾರಾಯಣನ ವೇಣೀಸಂಹಾರ, ವಸುಭಾಗ ಭಟ್ಟನ ಪಂಚತಂತ್ರ, ಅಷ್ಟೇಕೆ ಹಾಲರಾಜನ ಗಾಥಾಸಪ್ತಶತಿ, ಇವುಗಳು ರಾಧೆಯ ಲಾಸ್ಯದ ಮೊದಲ ಹೆಜ್ಜೆಗಳನ್ನು ಹುಡುಹುಡುಕುತ್ತಾ ಹೊರಟವನನ್ನು ಕ್ರಿಸ್ತಶಕದ ಆರಂಭದ ದಿನಗಳಿಗೆ ತಂದುಬಿಡುತ್ತದೆ! ಗಾಥಾಸಪ್ತಶತಿಯ ಮೊದಲ ನೂರರ ಕಡತದಲ್ಲಿಯೇ ಈ ಪದ್ಯವಿದೆ (ಪದ್ಯ ೮೯, ಅನು: ಎಸ್. ವಿ. ಪರಮೇಶ್ವರಭಟ್ಟ).

ಹೇ ಕೃಷ್ಣ, ರಾಧೆಯ ಗೋರಜವನು ನೀನು
ಮುಖಮಾರುತವನೂದಿ ಕಳೆಜೆ
ಅನ್ಯಗೋಪಿಕೆಯರ ಗೌರವವನು ನೀನು
ಇದರಿಂದ ಮಣ್ಣುಗೂಡಿಸಿದೆ!

ಈ ಹಾಲರಾಜ ಅಪ್ಪಟ ಕನ್ನಡ ನಾಡಿನವನು. ಪ್ರಾಯಶಃ ಕ್ರಿ.ಶ. ೧೫೦ ರ ಸುಮಾರಿಗೆ ರಚಿತವಾದ ಪ್ರಾಕೃತ ಗ್ರಂಥ ಗಾಥಾಸಪ್ತಶತಿ ಎಂದಮೇಲೆ ಕನ್ನಡ ನಾಡಿಗೆ ಆ ವೇಳೆಗೇ ರಾಧಾ ಮಾಧವ ವಿಲಾಸದ ಪರಿಚಯ ಉಂಟು. ಆದರೂ ಮೂಲ ಭಾಗವತವನ್ನೇ ಬಹುಮಟ್ಟಿಗೆ ಅನುಸರಿಸಿದ ರುದ್ರಭಟ್ಟನಾಗಲೀ, ಅರ್ಧ ನೇಮಿಯ ನೇಮಿಚಂದ್ರನಾಗಲೀ ರಾಧೆಯತ್ತ ಕಣ್ಣು ಹಾಯಿಸಲಿಲ್ಲ. ಎಂದಮೇಲೆ ಅನುವಾದವೇ ಆದ ಚಾಟುವಿಠಲನ ಕನ್ನಡ ಭಾಗವತದಲ್ಲಿ ಅವಳ ನೂಪುರ ದನಿ ಕೇಳುವುದೆಂತು?

ಹರಿದಾಸ ಸಾಹಿತ್ಯದಲ್ಲಿ ಸಿಂಹಪಾಲು ಯಶೋದೆಗೆ—ಅಲ್ಲಿ ವಾತ್ಸಲ್ಯಭಾವದ ವಿಜೃಂಭಣ. ಶೃಂಗಾರಕ್ಕೆ ಗೋಪಿಯರುಂಟು. ವಸ್ತ್ರಾಪಹರಣದ — ರಾಸ ವಿಜೃಂಭಣೆಯ ಕಥೆಯುಂಟು. ಆದರೆ ರಾಧೆಯೆಲ್ಲಿ? ಏಕೋ ಕನ್ನಡ ಕವಿಗಳು ಈ ಅಭಿಸಾರಿಕೆಯ ಲಾಸ್ಯವನ್ನು ಮರೆತೇಬಿಟ್ಟಿದ್ದಾರೆ. ಬಹುಮಟ್ಟಿಗೆ ರಾಧೆ ರಹಸ್ಯ ಮಯಿಯಾಗಿಯೇ ಉಳಿದಿದ್ದಾಳೆ. ಅವಳ ಮೋಹಕ ಚಿತ್ರಣ ಇಂದಿಗೂ ಉತ್ತರ ಭಾರತೀಯರ ವಿಶೇಷವಾಗಿ ಜಯದೇವನಂತಹ ಕವಿಗಳ ಪುಣ್ಯವಾಯಿತು.

ಹೀಗಾಗಿ ರಾಧೆಯ ಸೊಲ್ಲು ಮನಸ್ಸನ್ನು ಸೂರೆಗೊಂಡದ್ದು ನವೋದಯ ಕವಿ ಪರಂಪರೆಯಲ್ಲಿಯೇ ಎಂದರೆ ಸತ್ಯಕ್ಕೆ ತೀರ ಸಮೀಪ. ಕುವೆಂಪು, ಎಸ್. ಆರ್. ಎಕ್ಕುಂಡಿ, ಬೇಂದ್ರೆಯವರ ಕೃತಿಗಳಲ್ಲಿ ಸುಳಿದ ಈ ರಾಧೆ ಪೂರ್ಣ ಕಳೆಯಿಂದ ಪೊರೆಯೇರಿದುದು 'ಕನ್ನಡದ ಜಯದೇವ' ಎಂದು ಕವಿ ರಾಮಚಂದ್ರ ಉಚ್ಚಿಲ-ಹೆಸರಿಸಿದ ಪು.ತಿ.ನ. ಅವರಲ್ಲಿಯೇ. ತೀರ ಈಚೆಗೆ ಪ್ರಕಟವಾದ ಅವರ ಮಹಾಕಾವ್ಯ ಶ್ರೀ ಹರಿಚರಿತೆಯ ರಾಧೆಯನ್ನು ಕುರಿತು ಈಗ ಚಿಂತಿಸಬಹುದು.

ಬ್ರಹ್ಮವೈವರ್ತ ಪುರಾಣದ ಅದ್ಭುತ, ಅತಿರಂಜಿತ ಸೆರೆಯಿಂದ ರಾಧೆಯನ್ನು ಬಿಡಿಸಿಕೊಂಡ ಶ್ರೇಯಸ್ಸು ಆಧುನಿಕ ಕವಿಗಳದ್ದೇ-ಅಲ್ಲಿ ಆಕೆ ಗೋಲೋಕದ ರಾಸಮಂಡಲದ ಅಧಿದೇವಿ. ಕೃಷ್ಣನ ದಕ್ಷಿಣಾರ್ಧ ಸಂಜಾತೆ. ಅವನ ಅತಿಕಾಮ

ವನ್ನು ತಣಿಸಲೆಂದೂ ಹುಟ್ಟಿದವಳು. ಮಗುವಾದ ಅವನನ್ನು ಎತ್ತಿಕೊಂಡೋಡಿ, ರಾಸಮಂಡಲದಲ್ಲಿ ತರುಣನಾಗಿ ಬೆಳೆದ ಅವನೊಡನೆ ಕ್ರೀಡಿಸಿದವಳು. ಸಾಂಖ್ಯರ ಪ್ರಕೃತಿ ಪುರುಷ ತತ್ವದಮೇಲೆ ತಾಂತ್ರಿಕದ ಪ್ರಭಾವವೂ ಬಿದ್ದು ಈ ವೈಷ್ಣವಿ ನಿರ್ಮಾಣಗೊಂಡಿದ್ದಾಳೆ. ಜಯದೇವನ ರಾಧೆ ಪರಮ ಪ್ರೇಮಮಯಿಯಾದರೂ ರತಿಸುಖಸಾರಿಯಾದ ಕಾಮೋತ್ಕಂಠೆ. ಕೃಷ್ಣನಾದರೂ ಹಾಗೆಯೇ. ಕವಿಯ ಲಲಿತ ಕೋಮಲ ಕಾಂತಪದಾವಳಿಗೆ ಮನಸ್ಸು ಮರುಳಾದರೂ ಪಾತ್ರಚಿತ್ರಣ ಬಹು ಮಟ್ಟಿಗೆ ಜಘನಸ್ತನ ನಿಷ್ಠವಾದ ಸಂಭೋಗ ಶೃಂಗಾರವೇ.

ಮಾನವ ಹೃದಯದ ಸುಕುಮಾರ ಸೂಕ್ಷ್ಮತೆಗಳನ್ನು ಪುತಿನ ಅವರ ಗೋಕುಲ ನಿರ್ಗಮನದ ರಾಧೆಯಲ್ಲಿಯೇ ಕಾಣಬಹುದು. ರಸಋಷಿಯ ಸುಂದರ ಸೃಷ್ಟಿ ಅವಳು. ರಾಸಮಂಡಲದಲ್ಲಿ "ಕಂಪಿನ ಬಳಿವಿಡಿದಲರನ್ನು ಸೇರುವ ದುಂಬಿಯಂತೆ" ಬಂದು ಸೇರಿದವಳು. "ನಾವೇ ರಾಧೆ–ಅವನೇ ಶ್ಯಾಮ" ಎಂಬಂತೆ ಗೋಪಿಯರೆಲ್ಲ ಭಾವಿಸುವಂತೆ "ಅಕೋಶ್ಯಾಮ ಅವಳೆ ರಾಧೆ" ಎಂದು ಹುಡುಕಿ ಬರುವಂತೆ ಸಂದವಳು. ಮೀಸಲು ಮನವನ್ನೇ ಅವನಿಗೊಪ್ಪಿಸಿದ ಸುಬಲನ ಮಗಳು ರಾಧೆ ಪ್ರಾಯಶಃ ಅವಿವಾಹಿತೆ. ಹಿರಿಯರ ಭಯ ಈ ಅಬಲೆಗುಂಟು. ಸಮಾಧಿಯಿಂದೆದ್ದು ಬಂದು ಸಂಭ್ರಮದಿಂದ ಕೃಷ್ಣನನ್ನು ಬಲವಂದ ಮುನಿಗಳ ಗದ್ದಲದಲ್ಲಿ ರಾಸವು ಕಲಕಿ ಹೋದಾಗ ರಾಧೆ ಎಲ್ಲೋ ಜಾರಿಕೊಂಡಳು. ಖಿನ್ನನಾಗಿ ನಿಂತ ಹರಿಯನ್ನು ಬಗೆಬಗೆಯಾಗಿ ಗೋಪಿಯರು ಓಲೈಸಬೇಕಾಯಿತು. ರಾಧೆಯನ್ನೇ ಹುಡುಕಿ ಹೊರಡಬೇಕಾಯಿತು. ಕಂಸದೂತ ಅಕ್ರೂರ ಮಧುರೆಯಿಂದ ಬಂದು ಅಕ್ಕರೆಯ ಮಾತುಗಳಿಂದ ಬಿಲ್ಲಹಬ್ಬದ ಔತಣದಿಂದ ಗೋಪರನ್ನೂ ಖಿನ್ನಕೃಷ್ಣನನ್ನೂ ಸೆಳೆದೊಯ್ದನಲ್ಲಾ ಆಗ ರಾಧೆಯ ಚಿರವಿರಹ ಮೊದಲಾಯಿತು. ಕೃಷ್ಣನನ್ನು ರಾಧೆಯಾದರೋ ತಡೆವಳೇನೋ ಎಂಬ ಉತ್ಕಟ ಬಯಕೆ ಗೋಪಿಯರಿಗೆ. ಆದರೆ ಕೃಷ್ಣ ಹೃದಯವನ್ನು ಚೆನ್ನಾಗಿ ಬಲ್ಲ ಆಕೆ ಆ ವ್ಯರ್ಥ ಪ್ರಯತ್ನಕ್ಕೆ ತೊಡಗಲೇ ಇಲ್ಲ. ತನ್ನಂತೆಯೇ ಕೃಷ್ಣಸಂಗ ವಂಚಿತವಾದ ಬಡಮುರಳಿಯನ್ನು ಮೋಹದಿಂದ ತುಟಿ ಗಿಟ್ಟು ಧನ್ಯತೆಯನ್ನು ಅನುಭವಿಸುವ ರಾಧೆಯಿವಳು. "ಇದ್ದುದು ದಿಟ, ಅವನೆಂದುದು ದಿಟ / ನಾವು ನಲಿದುದು ದಿಟ ಬಹ ನೆಚ್ಚು ದಿಟ" ಎಂಬ ಭರವಸೆ ಯನ್ನೇ ನೆಮ್ಮಿನಿಂತ ಈ ದಿವ್ಯ ವಿರಹಿಣಿಯ ಚಿತ್ರಣ ತುಂಬ ಪರಿಣಾಮಕಾರಿ ಯಾದದ್ದು. ಬಗೆಯಲ್ಲಿ ನಟ್ಟು ನಿಲ್ಲುವಂತಹುದದು.

ಕಾವ್ಯ ಪ್ರಕಾರಕ್ಕೆ ತಕ್ಕಂತೆ ಶ್ರೀಹರಿಚರಿತೆ ಮಹಾಕಾವ್ಯದಲ್ಲಿ ರಾಧೆ ಮತ್ತಷ್ಟು ಬೆಳೆದು ನಿಂತಿದ್ದಾಳೆ. "ಸೂತ್ರೇ ಮಣಿಗಣಾವಿವ"ಕೋದುಕೊಂಡ ಗೋಪಿಯರ ನಡುವೆ ಆಕೆ ಹರಿಕೌಸ್ತುಭವಾಗಿ ಮೆರೆದಿದ್ದಾಳೆ. "ಗೋವ್ರಜದೊಳು ಆವಳು ರಾಧೆ"? ಎಂಬ ವಿಸ್ಮಯ ಕವಿಯನ್ನೂ ಕಾಡಿದೆ. ಎಲ್ಲಿಯವಳು ? ಯಾರಮಗಳು ? ಕನ್ಯೆಯೇ ಗೃಹಿಣಿಯೆ ? ಐತಿಹಾಸಿಕ ವ್ಯಕ್ತಿಯೆ ? ಬರಿಯ ಕವಿಕಲ್ಪನೆಯೆ ?

ಶುಕಮುನಿ–ವ್ಯಾಸರೇ ಅರಿಯದ ಈಕೆ ಎಲ್ಲಿಂದ ನುಸುಳಿ ಬಂದಳೋ ಎಂದು ಕವಿಯೇ ಸೋಜಿಗಗೊಂಡಿದ್ದಾರೆ [ಪು. ೬೬]. ಅವಳದ್ದು ದಿವ್ಯ ಪ್ರೇಮಾಯತನ ಮಾರ್ಗ. ಹರಿಯ ಒಲವನ್ನು ಸೂರೆಗೊಂಡವಳು. ಅವಳದು ಸಹಜ ಪ್ರೇಮ. ರೂಢಿಯ ನಿಯಮಗಳಿಗೆ ಅಳವಡುವುದಲ್ಲ. ಅದು ಬರಿಯ ಕಾಮದ ಸೆಳೆತವೊಂದೇ ಅಲ್ಲ. "ಪುರುಷೋತ್ತಮನ ಹಂಬಲದ ಪರಮ ಸಿದ್ಧಿ". ಸಾಯುಜ್ಯವಿಲ್ಲದಿದ್ದರೇನು–ಸಾನ್ನಿಧ್ಯವೊಂದೇ ಸಾಕು ಆ ಪ್ರೇಮಮಯೀ ಸಾಧ್ವಿಗೆ.

ಇದೇ ಈಗ ಹೊಸಹರೆಯದ ಒತ್ತು ಅವಳಿಗೆ! "ಎಳೆಹರೆಯದ ಎಚ್ಚರಕೆ ಕಣ್ತೆರೆವ ಜಾಗರವೆ ಜಾಗರ!" ಕೈಯಲ್ಲಿ ಕನ್ನಡಿ ಸ್ವಸ್ವರೂಪ ಮುಗ್ಧೆ. ಮನ್ಮಥನೊಡನೆ ಮೂಡಿದ ಸುಕುಮಾರ ಸ್ನೇಹ. ಓರೆನೋಟದ ಮಿಂಚಿರುವಾಗ ಮಾತೇಕೆ? ರೂಢಿಯ ಬದುಕಿನಲ್ಲಿ ಅರುಚಿ. ಉಡುಗೆ–ತೊಡಿಗೆ–ಜಡೆಕುರುಳ ಸಿಂಗರದಲ್ಲೇ ಹೊತ್ತು ಹೋಗುತ್ತಿದೆ. ಯಾವ ಹಿರಿಯರ ನಿರ್ಬಂಧವನ್ನೂ ಮನಸ್ಸು ಒಲ್ಲದು. ಈ ಹೊಸ ಜವ್ವನದ ಲೋಕದಲ್ಲಿ ಸಹಜ ಭೀರು ಆಕೆ. ಯಾರನ್ನು ಸೆಳೆಯದು ಈ ಬೊಗಸೆಗಂಗಳ ಚೆಲುವೆಯ ನೋಟ." ಆದರೆ ಅವಳೋ ಹರಿಹೃದಯಕ್ಕೆ ತೆತ್ತುಕೊಂಡವಳು. ಅವನ ವೇಣುನಾದದ ಮಾಧುರ್ಯ ಪೋಷಿತೆ ಅವಳು. ಅದರ ಜಾಡನ್ನೇ ಸದಾ ಗುಣುಗುಣುತ್ತಿರುವಳು. ಸಖಿಯರೊಡನೆ ನೀರಿಗೆ ಹೋಗಲೂ ಬೇಡವಾಗಿದೆ ಇಂದು. ಏಕಾಂತಪ್ರಿಯೆ. ಭಾಂಡೀರ ವೃಕ್ಷದೆಡೆಯಿಂದ ಮುರಳೀನಾದ ಮತ್ತೆ ಮತ್ತೆ ಮುದ್ದಿಕ್ಕುತ್ತಿದೆ. "ಚೆಲುವೆ ನೀ, ಜಗಜಗವೆ ನಿನಗೊಲಿದಿಹುದು. ಆರಿಹರು ಸರಿದೊರೆ ನಿನಗೆ? ನಿನ್ನ ಕಾಲ್ವಿಡಿದು ಒಲುಮೆ ಬಿಕ್ಕೆಯನೀತೆರದಿ ಬೇಡುತಿಹ ನೀರ" ಎಂದು ಅದು ಪಿಸುಗುಟ್ಟುತ್ತಿದೆ. ಹುಡುಗಿ ಪೊರೆಯೇರಿಬಿಟ್ಟಿದ್ದಾಳೆ. ಲಜ್ಜಿತಳಾಗಿದ್ದಾಳೆ. ಆದರೆ ಕನ್ನಡಿವಿಡಿದು ತನ್ನಲ್ಲಿಲ್ಲದ ನೂರುಕೊರತೆಯನ್ನು ಗುರುತಿಸುತ್ತಾ ಹೊನ್ನಿ ಹರಿಣಾಕ್ಷಿಯರು ಇನ್ನೂ ಚೆಲುವೆಯರಲ್ಲವೆ? ಅವರೆದುರು ನಾನೇ ಎಂದು ಕೊಂಚ ಖಿನ್ನಳಾಗುತ್ತಾಳೆ. ಆಗೆಲ್ಲ ಮನಕ್ಕೆ ಭರವಸೆ ನೀಡುವ ಮೃದು ಮಧುರ ನಿಶ್ಚಿತ ಉಲಿಯೆಂದರೆ ಈ ವೇಣುನಾದವೊಂದೇ. ಕೃಷ್ಣಪ್ರೇಮದ ಖಚಿತ ಭರವಸೆ ನೀಡುವ ಸಾಂತ್ವನದ ನಾದವದು. ಆದರೆ ಎಲ್ಲರ ಕಿವಿಯಲ್ಲೂ ಹೀಗೆಯೇ ಪಿಸುಗುಟ್ಟೀತೆ?—ಇರಲಿ 'ಶ್ರೀಹರಿ ಎಲ್ಲರವ ನಾನವನವಳು' ಇಷ್ಟು ಸಾಕು. "ಹೊಳೆ ಕಡಲಿನದು–ಕಡಲು ಎಲ್ಲರದು" ಎಂಬ ಸಮಾಧಾನ. ಕರುಬಿಲ್ಲ ಹಗೆಯಿಲ್ಲ. ಪ್ರೇಮಮಯಿ ರಾಧೆ.

ಅವನ ಒಳಗು ಹೇಗೋ? ಚೆಲುವೆ ಚಿಂತಿಸುತ್ತಾಳೆ. ಅವನು ನಿನ್ನವನು ಎಂದೇ ಭಾವಿಸಲು ನೀನೇನು ಸೂರ್ಯನಿಗೆ ಆಶ್ರಯವಿತ್ತ ಆಗಸವೇ? ಎಂದು ನಿಟ್ಟುಸಿರಿಡುತ್ತಾಳೆ. ಕವಿ ನುಡಿಯುತ್ತಾರೆ ಒಲವಿನ ಬಗೆಯೇ ಹೀಗೆ—ಅದರಿಂದ ಆಸೆ, ಆಸೆಯಿಂದ ಕೊರಗು, ಅಹಂಕಾರ ಭಂಗ, ದೈನ್ಯ, ಸ್ವಾರ್ಥ ನಾಶ—ಜೀವಾತ್ಮವನ್ನು ತನ್ನ ಪರಿಮಿತ ಕೋಶದಿಂದ ಹೊರ ಹೊರಡಿಸಿ ಬೇರೊಂದರ ಆಶ್ರಯಕ್ಕೆ

ಸೆಳೆದೊಯ್ಯುವ ದಿವ್ಯಭಾವವಲ್ಲವೇ ಈ ಒಲವು! [ಪುಟ. ೭೦]. ಅಂಥ ಒಲವು ತರುವ ವಿರಹವೇ ತಪಸ್ಸು. "ಪಡುತಿಹಳು ರಾಧೆ ಆ ಪ್ರಾಪಕ ವಿರಹವನು." ನಡುವಿಗೆ ಕೊಡವೇರಿಸಿದ ಬಿಡುಗಣ್ಣಿನ ಬಡನಡುವಿನ ಸುಂದರಿ ಹರಿಯನ್ನು ಕಾಣುವ ಕಾತರದಿಂದ ಯಮುನಾ ನದೀ ತೀರಕ್ಕೆ ಅಡಿಯಿಡುತ್ತಾ ಹೊರ ಹೊರಡುತ್ತಾಳೆ.

ಈ ಅಭಿಸಾರಿಕೆಯ ಮುಗ್ಧಕಾತರ ಭಾವುಕನನ್ನು ಮೊದಲ ಚಿತ್ರಣದಲ್ಲೇ ಸೆಳೆದುಬಿಡುತ್ತದೆ.

* * *

ರಾಧಾಕೃಷ್ಣ ಸಂಗತಿ ಮತ್ತು ರಾಧಾಕೃಷ್ಣ ಮಿಲನಂ ಎಂಬ ಎರಡು ಉಲ್ಲಾಸಗಳಲ್ಲಿ ಪುತಿನ ಈ ಕಣ್ಣೆಯನ್ನು ಮತ್ತಷ್ಟು ವಿಸ್ತರಿಸುತ್ತಾರೆ. ಶ್ರೀಕೃಷ್ಣ ಗೋಪೀಜಾರನಾದುದೇ ಹೃತ್ಸುಖವನ್ನು ಹೆಚ್ಚಿಸಲು ಕಲ್ಲುಮನಸ್ಸನ್ನು ಮೃದುಗೊಳಿಸಲು. ಅಂತಃಕರಣವನ್ನು ರಸಗೊಳಿಸಲು ಎನ್ನುತ್ತಾರೆ ಕವಿ.

ಕೃಷ್ಣಾಭಿಸಾರಿಕೆಯಾದ ರಾಧೆ ಬನದ ಪೊದರುಗಳ ಬಳಿವಿಡಿದು ಹೊರಟಳು. ಹರಿಯ ಧ್ಯಾನವೇ ಉಸಿರು ಅವಳಿಗೆ. ಈ ಮೊದಲು ಗೋಪಿವಲ್ಲಭ ಚೀರ ಚೋರನಾಗಿ ಗೆಳತಿಯರ ವಸ್ತ್ರಗಳನ್ನು ಕದ್ದು ಅವರ ಬೆತ್ತಲೆ ಮೈಯನ್ನು ನೋಟದಲ್ಲಿ ಮುದ್ದಿಸಿದ ಕಥೆಯನ್ನು ಮತ್ತಷ್ಟು ರಸವತ್ತಾಗಿ ಬಣ್ಣಿಸುವುದನ್ನು ಕೇಳಿ ಕೇಳಿ ರೋಮಾಂಚಿತಳಾಗಿದ್ದಾಳೆ. ಅದರ ಮರು ನೆನಪಿನಲ್ಲಿ ಮತ್ತು ಪ್ರೇರೆಯೇರುತ್ತಿದ್ದಾಳೆ. ಗೆಳತಿಯರನ್ನು ಮೋಹದಿಂದ ಅಪ್ಪುತ್ತಾಳೆ; ಹರಿಯಿತ್ತು ಅವರುಟ್ಟ ವಸ್ತ್ರವನ್ನು ಎದೆಗೇರಿಸುತ್ತಾಳೆ; ತಾನು ಅವರೊಡನೆ ಅಂದು ಇಲ್ಲದುದಕ್ಕಾಗಿ ಪರಿತಪಿಸುತ್ತಾಳೆ; ಯಮುನೆಯ ದಡದಲ್ಲಿ ಬಟ್ಟೆಕಳಚಿ, ನೀರಿಗಿಳಿದು, ಆಸೆಗಣ್ಣಿಂದ ಅತ್ತಿತ್ತ ನೋಡುತ್ತಾಳೆ. ಹೊರಬಂದು ತುಂಬಿದ ಕೊಡವನ್ನೇರಿಸಿ ಆಲಸಗತಿಯಿಂದ ನಡೆಯುತ್ತಾಳೆ. ಇದು ಏನಾಯ್ತು ಎಂದು ತಿಳಿವ ಮೊದಲೆ ಹೊದರಿನಿಂದೆದ್ದ ಹರಿ ಅವಳ ಕಣ್ಣು ಮುಚ್ಚಿಬಿಡುತ್ತಾನೆ. ಕೊಡವುರುಳಿ ಕೆಸರಾಯ್ತು. ಬವಳಿ ಬಂದಂತಾಯ್ತು. ಬಳ್ಳಿ ಮೈ ನೆಲಕೆ ಕುಸಿಯಿತು. ಈ ಕೃಷ್ಣನೋ ಕೆನ್ನೆಗೆ ಕೆನ್ನೆ ತಾಗಿಸುತ್ತ ರಾಧೇ....ರಾಧೇ....ಎಂದು ಲಲ್ಲೆಗರೆಯುತ್ತಿದ್ದಾನೆ. ಕಣ್ಣು ತೆರೆ ವಿಶಾಲಾಕ್ಷಿ ಎಂದು ಮುದ್ದಿಸುತ್ತಿದ್ದಾನೆ. ಸುಖ ಸೊಕ್ಕಿ ಅವನ ತೊಡೆಯಲ್ಲಿ ತಂಗಿ ಬಿಟ್ಟಳು ಹುಡುಗಿ. ಬದುಕೆಲ್ಲ ಸೋಂಕಿನಲ್ಲೇ ಮುಪ್ಪುಗಟ್ಟಿನಿಂತಂತಾಗಿದೆ. ಛಂಗನೆ ನೆಗೆದು- "ಎಲೆ ತುಡುಗ ಪಟ್ಟೆ ಪಗಲೊಳು ಹೆರವರ ಮಗಳನೀಪರಿಯೊಳಗೆ ಮುಟ್ಟುವರೆ ಪೋ" ಎಂದು ಹುಸಿಕೋಪದಿಂದ ಛೇಡಿಸುತ್ತಾಳೆ. ನಾನು ಮಿಕ್ಕವರಂತಲ್ಲ ಹೋಗು ಎಂಬ ರಾಧೆಗೆ ಆ ತುಡುಗನ ತುಂಟ ಉತ್ತರವೇನು? ರಾಧೇ ನಿನ್ನನ್ನೇ ನೆನೆನು ಅವರಿಗೊಲಿಯುತ್ತೇನೆ ತಿಳಿದೆಯಾ! ಹರಿಣಿಯಲ್ಲಿ ನಾನು ಕಾಣುವುದು ನಿನ್ನ ಬೊಗಸೆಕಂಗಳ ಚೆಲುವು. ಹೊಸಬಿಯಲ್ಲಿ

ಸ್ಮರಿಸುವುದು ನಿನ್ನ ಕೊರಲ ಮಾಟ. ಚೆಂದವ್ವೆಯಲ್ಲಿ ನಿನ್ನದೇ ತುಂಬಿದೆ. ಹೊನ್ನಿಯಲ್ಲಿ ಸೆಳೆ ನಡು;.... ಎಲೆ ಹೆಣ್ಣೆ ನೀನು ಅವರೆಲ್ಲರ ಸಾರಸರ್ವಸ್ವ.... ನನ್ನ ಸರ್ವಸ್ವ....ಎಂದು ಪ್ರಿಯಾರಾಧನೆಗೆ ತೊಡಗುವವನಿಗೆ ಏನುತ್ತರ ಸಲ್ಲ ಬಲ್ಲದು. ಆದರೆ ಹುಡುಗಿ ಜಾಣೆ. ಅಯ್ಯಾ ಘನವಂತ ಈ ಕಳ್ಳೊಲುಮೆ ನನಗೆ ಸಲ್ಲದು. ಹಿರಿಯರೇನೆಂದಾರು? ಕೃಷ್ಣ ಸೋಲುತ್ತಾನೆಯೇ? ಅಯ್ಯ ನಂದಗೋಪ ನನ್ನನೇ ನಿನಗೀಯುವಂತೆ ಮಾಡಲೆ? ನಾಳೆ ಸಂಜೆ ಹೊಂಗೆ ತೋಪಿಗೈತರುವುದನ್ನು ಮರೆಯ ಬೇಡ ಕಂಡೆಯಾ ಎಂದು ಸಿರಿಮುತ್ತನ್ನು ಕೆನ್ನೆಗೆ ಥಟ್ಟನೆ ಕೆನ್ನೆಗೊತ್ತಿ ಮರೆಯಾಗಿಯೇ ಬಿಟ್ಟ ಕೃಷ್ಣ. ರಾಧೆ ಬೆಬ್ಬೆರಗಾಗಿ ನಿಂತರೇನಚ್ಚರಿ! ಆದರೆ ಅವಳ ಕೊರಗೂ ಎಂತಹ ಉತ್ಕಟ ಅಭಿಲಾಶೆಯದು. ಅಯ್ಯೋ ಈ ಸುಖದ ಗಳಿಗೆಯಲ್ಲಿ ನನ್ನತನವನ್ನು ಏಕೆ ಅಳಿಯದೆ ಹೋದೆ? ಏಕೆ ನಾನು ನಾನಾದೆ? ಪೂರ್ಣ ಸಮರ್ಪಣೆ ಏಕೆ ಸಾಧ್ಯವಾಗದೆ ಹೋಯಿತು! ಹೀಗೆ ಸುಬಲನ ಮಗಳು ಮರುದಿನದ ಚಿಂತೆಯಲ್ಲಿ ಮುಳುಗಿ ಹೋದಳು, ಭಾರದ ಹೆಜ್ಜೆಗಳನ್ನು ಮನೆಯೆಡೆಗೆ ಇರಿಸುತ್ತಾ.

ಮರುದಿನ ಅವಳ ಸೊಬಗಿನ ಸಿಂಗರವೇನು? ಆತ್ಮಾರಾಧನೆಯ ಮೋಹಕತೆ ಏನು? ಪ್ರಿಯೆಗೆ ಸುಪ್ರಭಾತವನ್ನುಲಿದು ಅತ್ತ ಹರಿ ಜಗುನೆ ತೀರಕ್ಕೆ ಸರಿದು ಹೋದ. ಹರ್ಷದ ಉಕ್ಕು ಹೆಚ್ಚಿತು ಹುಡುಗಿಗೆ. [ಅವಳಿಗೆ ಈ ಕೃತಿಯಲ್ಲಿ ಒಬ್ಬ ತಂಗಿಯೂ ಇದ್ದಾಳೆ] ತಂಗಿಯ ಜಡೆಯೆಳೆದು ಕೀಟಲೆಗೆಯ್ಯುತ್ತಾ ಸುಬಲನ ಕಿವಿಗೆ ಸೇವಂತಿಗೆ ಸಿಕ್ಕಿಸುತ್ತಾ ಮುದ್ದಿಸಿ ಓಡುತ್ತಾಳೆ. ರಾಧೆ ಎದೆಯ ತುಂಟಾಟವನ್ನು ಬಚ್ಚಿಟ್ಟುಕೊಳ್ಳಲಾರದೆ. ಇಳಿಹೊತ್ತಿನಲ್ಲಿ ಏನೋ ಹಿರಿಯರ ಸಭೆ. ಗೋವರ್ಧನ ಪರ್ವದ ಸಿದ್ಧತೆಗಳ ಚರ್ಚೆ. ಮನೋಹರದ ಉಂಡೆಗಳ ಹೆಡಿಗೆಯನ್ನು ಹೊತ್ತು ರಾಧೆಯೂ ಅತ್ತ ನಡೆದಳು. ಹಿರಿಯರು ಉಂಡೆಯನ್ನು ಸವಿಸವಿದು ಕಡುಜಾಣೆಯ ಪಾಕ ಕುಶಲತೆಯನ್ನು ಹೊಗಳಿದರು. ಮುಚ್ಚಂಜೆ ಯಾಯಿತು ಹೊರಟೆ ಎಂದು ಕೃಷ್ಣನೆಡೆಗೆ ಕಳ್ಳ ನೋಟಬೀರಿ ಹೊರಡುವಾಗ ನಂದಗೋಪನೆನ್ನುತ್ತಾನೆ. "ಮುಗಿಲ ಬಾನೊಳು ಮೋಡ ಕವಿದಿದೆ....ಬೆದುರಿಗನು ಈ ಹಸುಳೆ. ನಿನ್ನ ಸಂಗಡವೊಯ್ಯಿ ಮನೆಗಿವನ ನಮಗೆ ಮಾತುಂಟಿಲ್ಲಿ. ಮುಗಿಸಿ ಬಹೆವು!" ರೊಟ್ಟಿ ಜಾರಿ ತುಪ್ಪಕ್ಕೇ ಬಿದ್ದಿತಲ್ಲಾ. ರಾಧೆಯ ಕೈ ಹಿಡಿದು ತಮಾಲ ಛಾಯೆಯಲ್ಲಿ ಹರಿ ನಡೆದ. ಅಗೋ ಆ ಕ್ಷಣದಲ್ಲಿ ಹೆಣ್ಣು ಗಂಡುಗಳ ಜಗನ್ಮೋಹಕ ಪ್ರಣಯ ಧುನಿ ಮೊಳಗಿತಲ್ಲಾ ಎಂದು ಕವಿ ರೋಮಾಂಚಿತ ರಾಗುತ್ತಾರೆ. ಜಯದೇವನ ಗೀತಗೋವಿಂದದ ಸನ್ನಿವೇಶವನ್ನೇ ಬಳಸಿಕೊಂಡು ಬೆಳೆಸುತ್ತಾ ಹೋಗುತ್ತಾರೆ. ಅಲ್ಲಿಯ ಇಂದ್ರಿಯ ಸಿಷ್ಠ ಪ್ರಣಯಲೀಲೆಯನ್ನು ಪ್ರೇಮ ತತ್ವವಾಗಿ ಹಿಗ್ಗಿಸುತ್ತಾರೆ. ಪರಸ್ಪರ ವಿನಿಮಯ ಹರ್ಷ ಸುಖವನ್ನು ಸಾತ್ವಿಕವಾಗಿಸುತ್ತಾ ಕಾವ್ಯದ ಆಯಾಮವನ್ನು ಬೆಳೆಸುತ್ತಾರೆ.

ಜಗುನೆಯ ತೋಪಿನ ಕಡುನೆಳಲಿನಲ್ಲಿ ರಾಧಮಾಧವನು ನಡೆದರು. ರಾಧೆಯ ಕೈಯಲ್ಲಿ ಹುದುಗಿದ್ದ ಹರಿಯ ಕೈ ಬಹುಬೇಗ ಹಿಗ್ಗಿತು! ತರುಣಿಗೆ ಬೆರಗು. ತನಗೂ ಮಿಗಿಲಾಗಿ ಬೆಳೆದು ನಿಂತಿದ್ದಾನೆ ನಂದಗೋಪ ಕುಮಾರ. ಅವನ ರಸಿಕ ಮಾಂಸಲ ಬೆರಳುಗಳು ತನ್ನನ್ನು ನೇವರಿಸುತ್ತಾ ತನ್ನನ್ನು ರೋಮಾಂಚನಗೊಳಿಸುತ್ತಿವೆ. "ಎಲೆ ಮಾಯಿಗ, ಗಳಿಗೆ ಮುನ್ನ ನೀನೆಳ ಹುಡುಗ ತಂದೆಯ ಸನಿಹದೊಳು! ಇಂದೋ ನಾ ಬಗೆದಂದ ಮಾಗಿ ಪುರುಷ! ಹರಿ ಅವನೆ ನೀ? ಸೋಜಿಗವೆನಗೆ ಆ ಎಳವೆ ಈ ಬಳವಿ." ಅಯ್ಯಾ ಕೊಳಲ ದನಿಯಲ್ಲಿ ಭಾವಗಳನ್ನು ಬಾಜಿಸುವುದನ್ನು ಕಂಡಿದ್ದೆ. ಮನ ಬಂದಂತೆ ಮೈಯನ್ನೂ ರೂಪಿಸುವ ಚದುರೂ ನಿನಗುಂಟೋ ಎಂದು ಬೆರಗಾಗುತ್ತಾಳೆ. ಕೃಷ್ಣನ ಕಥೆ ಏನು? ಕೊಳಲಿನವರವೇ ಅದು. ಅವನ ಕುಶಲ ಗಾನಕ್ಕೆ ಮರುಳಾದ ತಾಪಸನೊಬ್ಬ ಈ ವರವನ್ನು ಹರಿಗೆ ದಯಪಾಲಿಸಿದನಂತೆ. "ನಿನಗಿನಿದೆ ಎನ್ನ ಈ ತೆರ?" ಎಂದು ಮುದ್ದುಗರೆವ ಹರಿಗೆ ಉತ್ಕಂಠಿತ ರಾಧೆ "ಇಂತೆಯಿರು ಇಂತೆಯಿರು ಬೇರೆ ತೆರವಾಗದಿರು ಎಂದಿಗುಂ" ಎನ್ನುವುದು ಅತಿ ಸಹಜವೇ. ಅವನ ಬೊಗಸೆಗಂಗಳ ಹೀರು ನೋಟದಲ್ಲಿ ಕರಗಿಯೇ ಹೋದಳು ಕಾಮಿನಿ. ಲಜ್ಜೆ ಕುಸಿಯಿತು. ಅವನು ರೆಪ್ಪೆಗೆ ಮುತ್ತನೊತ್ತಿದರೆ ತಾನೇ ತುಟಿಯೊಡ್ಡುವಷ್ಟು ಬೆಳೆಯುತ್ತಾಳೆ. ಹೊಳೆ ತಾನು ಅಳಿಯುವವರೆಗೆ ಕಡಲಿಂದ ಬೇರೆ. ಬೆರೆತಮೇಲೆ ಏನುಂಟು ತನ್ನತನ? ಒಟ್ಟಿನಲ್ಲಿ ಇಬ್ಬರಿಗೂ ಪ್ರಿಯ ಸಾಯುಜ್ಯ ಸುಖ. ಸಮಸ್ತ ಪ್ರಕೃತಿಯೇ ಅವರ ಪ್ರಿಯ ಕೂಟಕ್ಕೆ ಸಾಕ್ಷಿ. ಯಾವ ಅರಕೆಯಿದೆ ಅಲ್ಲಿ. ಕೈಹಿಡಿದು ಮೌನದಲ್ಲಿ ಕುಳಿತರೂ ಸಾಕು. "ವಿಶ್ವದ ಗುಟ್ಟು, ತಳವಿಲ್ಲದಾಸೆಯ ತುಂಬು, ತನ್ನು ಸಿರಿನಿಂಬು, ಕನಸಲ್ಲ ನನಸೆಂಬ ನಂಬುಗೆ," (ಪುಟ ೮೬). ಅವರ ಪ್ರಣಯವಿಲಾಸದ ಬಣ್ಣನೆಯಲ್ಲಿ ಕನ್ನಡದ ಜಯದೇವನೇ ಆಗಿ ಬಿಡುತ್ತಾರೆ ಪು.ತಿ.ನ. ಲೀಲೆಯ ಅಂತ್ಯದಲ್ಲಿ "ಒಲುಮೆ ಮಡುಗೊಳುವಂಥ ಮೌನದೊಳಾಕೆಯಾ ಕೈಮೇಲೆ ಕಂಬನಿ ಚೆಲ್ಲಿ ಯಾತ್ಮಾರ್ಪಣಾಗಮ ಕಲ್ಪವನು" ಹರಿ ರಚಿಸುವಲ್ಲಿ ಈ ಬಣ್ಣನೆ ರಸೋತ್ಕಟವಾಗಿ ಸಾರ್ಥಕ ವಿಶ್ರಾಂತಿಯನ್ನು ಪಡೆದುಬಿಡುತ್ತದೆ. "ನಾನಾ ದ್ವೈತಾದ್ವೈತ ಕಾಮ ಪ್ರೇಮ ರಾಧಾಕೃಷ್ಣಯೋಗ ಕದನಾ ನೆನೆನೆನೆದು ನೀಗುತಿಹೆನೆನ್ನಾಧಿಗಳ ಕೊಳೆಯಳಿದು ರುಚಿಗೊಳ್ಳುವುದು ಮನವಾಮೋದದಿಂ. ಕುಲಟೆಚಿತ್ತಂ ಸತೀತ್ವಕೆ ಸಲ್ಲುವುದಪನಾಗೊಲ್ಲ ಹೆಣ್ಣಿಗೆಯಿತ್ತ ಸೋಂಕಿನ ಸೊಗದ ಸಾಕ್ಷಾತ್ಕರಣದಿಂ" ಎಂಬಲ್ಲಿ ಜಯದೇವನನ್ನೂ ಮೀರಿ ಬಿಡುತ್ತಾರೆ ಪು.ತಿ.ನ. ಕಾವ್ಯದ ಆಯಾಮದಲ್ಲಿ ಈ ಪ್ರಣಯ ತತ್ವವನ್ನೇ ಮುಂದೆ ಸವಿಸ್ತಾರವಾಗಿ ಚರ್ಚಿಸುತ್ತಾರೆ. ಇದು ಬರಿಯ ಲೌಕಿಕ ಕಾಮವಲ್ಲ. ಯೋಗೀಶ್ವರನ ದಿವ್ಯಕಾಮ. ಅದು ದೇಹಪ್ರಪೆಯಲ್ಲಿ ಆತ್ಮ ಪಾನ ಸಂರಂಭವಂತೆ. ಕರಣಗಳನ್ನು ಉತ್ತೇಜಿಸುತ್ತದೆ— ತಣಿಸುತ್ತದೆ. ಮನಸ್ಸನ್ನು ಅನ್ಯಾಸಕ್ತಿಯಿಂದ ತಣಿಸಿ ಕಳೆಯುತ್ತದೆ. ಕುಶಲ

ಸ್ಪರ್ಶ ಕಲೆಯಿಂದ ಚಿತ್ತವನ್ನು ತಣಿಸಿ ಕಳೆಯುತ್ತದೆ. ಹೊಗಳಿಕೆಯ ಸರಸತೆಯಿಂದ ಅಹಂಕಾರವನ್ನು ತಣಿಸಿ ಕಳೆಯುತ್ತದೆ. ಅಂತ್ಯದಲ್ಲಿ ಅದು ಕೇವಲ ಆತ್ಮಗಳ ಮಧುರ ಮಿಲನ. ಒಲವಿಲ್ಲದ ತನುಮಿಲನ ದೈವಕ್ಕೆ ಮಾಡಿದ ಅಪಚಾರ. ಈ ರಾಧಾಮಿಲನ ಯೋಗದಲ್ಲೋ ತೀರ್ಥಸ್ನಾನದ ಶುಚಿತೆಯಿದೆಯಂತೆ. ಅಲ್ಲಿ ತುಟಿಗಳ ಮಿಲನವೇ ಕೈವಲ್ಯ. ಮುಳಿಸೇ ಶಾಪ. ಸರಸತೆವರ. ಸಮಸ್ತ ಲೋಕವನ್ನು ಹಬ್ಬಿ ತಬ್ಬಿದ ಈ ರಾಧಾಮಾಧವ ಯೋಗವೇ ಋಕ್-ಸಾಮ, ಶ್ರೀ-ನಾರಾಯಣ, ಶೈಲಜಾಶಂಕರ, ವಾಣೀ ವಿರಂಚಿ, ಇತ್ಯಾದಿ ದೈವೀ ದಾಂಪತ್ಯದಲ್ಲಿ ಹೊಳಲಿಡುತ್ತಿದೆ. ರತ್ನವನ್ನು ರವಿಕಿರಣ ರಮಿಸಿ ತನ್ನ ಶಕ್ತಿಯನ್ನು ತಾನೇ ಕಂಡುಕೊಳ್ಳುವಂತೆ ಕೃಷ್ಣನೂ ಸಾರ್ಥಕತೆಯನ್ನು ಪಡೆದು ಪೊರೆಯೇರಿದ ರಾಧಾ ಸಂಗದಲ್ಲಿ. ಪರಿಪೂರ್ಣ ಕಾಮನೆನಿಸಿದ. "ತನ್ನಂ ತಾನು ಕೆರತೆರುತ್ತಲೇ ಸುಖಿಯಪ್ಪ ಬೆರಗಸರಿತ". ಆತ್ಮದ ಭೋಗ ಭಾಗ್ಯ ಮಾಧ್ಯಮಳಾದಂತೆ ಆ ಕಾಮಿನಿ ಕೃಷ್ಣನಿಗೆ. ಧನ್ಯೆ ರಾಧೆ!

ಪೂರ್ಣ ಕಾಮರಾದ ಈ ಪ್ರಣಯಿಗಳು ಸುಖದ ಪರಮ ಶಾಂತಿಯಲ್ಲಿ ಅವೂ ಎಂದುಲಿಯುತ್ತಾ ಹಗುರಾಗಿ ಮನೆಗೈದಿದರು. ರಾಧೆ ತಾನು ಮೂಲ ಪ್ರಕೃತಿಯೋ ಎಂಬಂತೆ ಹರಿಯನ್ನು ಕೈಹಿಡಿದೊಯ್ದಳು. ಈ ಸೂಚನೆ ಕವಿಗೆ ಬ್ರಹ್ಮವೈವರ್ತದಿಂದ ದೊರಕಿರಬಹುದು. ಆದರೆ ಅಲ್ಲಿಲ್ಲಿ ಈ ಸೂಕ್ಷ್ಮತೆ, ಈ ನವಿರು, ಈ ಸ್ವೋಪಜ್ಞತೆ! ಅದೊಂದು ಅದ್ಭುತ ಪುರಾಣ ಇದೋ ಪ್ರತಿಭಾಜನ್ಯ ಕಾವ್ಯ. ಅಷ್ಟು ಸಾಕು.

ಪ್ರಾಯಶಃ ಕಾವ್ಯಾನಂದದ ಪರಿಯೇ ಹೀಗೋ? ಅದು ಬ್ರಹ್ಮಾನಂದ ಸೋದರವಷ್ಟೇ? ಮನೆಯ ಕಜ್ಜದ ನೆನೆಪು- ಭವ ಸನಿಯಕ್ಕೈದಿತಲ್ಲಾ. ಕೊನೆ ಮುತ್ತನೊತ್ತಿದ ರಾಧೆ ಕೃಷ್ಣನನ್ನು ನಂದನ ಮನೆಗೆ ತಂದಳು. ಯಶೋದೆಗೆ ಮುದ್ದು ಕುವರನನ್ನೊಪ್ಪಿಸಿದಳು. ಅವಳಿಗೆ ಉಕ್ಕಿದ ಅಕ್ಕರೆ. ಬಿಗಿಯಪ್ಪಿ ಮೂಸಿ ಮುಂಡಾಡಿದಳು ಮಗನನ್ನು. "ದಣಿದಿಹಿರಿ ಎಲ್ಲಲೆದಿರೇ" ಎಂದು ಪ್ರೀತಿಯಿಂದ ಇಬ್ಬರನ್ನೂ ಛೇಡಿಸಿದಳು. ಎಳೆಯನನ್ನು ಕರೆತಂದೆ ಪಾಡುಪಟ್ಟೆ ಎಂದು ಸವಿನುಡಿದು ಬೊಗಸೆಗೆ ಸಕ್ಕರೆ ತುಂಬಿ ಹೋಗಿ ಬಾ ಹುಡುಗಿ ಎಂದಳು, ವಾತ್ಸಲ್ಯಮಯಿ ಯಶೋದೆ. ಅಬ್ಬಾ ಪು.ತಿ.ನ. ಛಾಪು— ಎಷ್ಟು ಬಲವತ್ತರ, ಎಷ್ಟು ಸಿಹಿ! ಭಾವದಿಂದ ಭವಕ್ಕೆ ಬಂದಾಗಲೂ ಎಚ್ಚರ ತಪ್ಪದ ಅಕ್ಕರೆ ಅದು.

ಮುಂದೆ ನಾವು ರಾಧೆಯನ್ನು ಕಾಣುವುದೆಲ್ಲಿ? ರಾಸಕ್ರೀಡೆಯೂ ಉಳಿದ ಗೊಲ್ಲತಿಯರಿಗೆ ಮೀಸಲು. ಆ ಸಂತಸದ ಕಾರಂಜಿಯಿಂದ ಏಕೋ ಅವಳು ದೂರವೇ ನಿಂತು ಬಿಟ್ಟಿದ್ದಾಳೆ. ಕೃಷ್ಣೋತ್ಕಂಠೆಯಾಗಿ ಹೊಳೆ ಕರೆ ಬನದಿ ಅವನನ್ನೇ ನಿರುಕಿಸುತ ನೀರಜಾಕ್ಷಿ ತವಕಿಸುತ್ತಿದ್ದಾಳೆ. ಮುಂದೆ ಅಕ್ರೂರನೊಡನೆ ಹಿರಿಯರು ಬಂದು ರಾಸವೆಲ್ಲ ಕಲಕಿ, ಮಧುರೆಗೆ ಆಹ್ವಾನ ಬಂದು, ಉತ್ಸಾಹಿತ

ಬಲರಾಮ ಕೃಷ್ಣನ ಮುರಳಿಯನ್ನೇ ಕಿತ್ತೆಸೆದು ಹೊರಹೊರಡು ಮಥುರೆಗೆ ಎಂದು ಉದ್ಗರಿಸಿ, ಕೃಷ್ಣ ಖಿನ್ನನಾಗಿ....ಏನೆಲ್ಲ ನಡೆದು ಹೋಯಿತು. ಆಗಲೇ ಗೆಳತಿಯರಿಗೆ ರಾಧೆಯ ನೆನಪು. ಅವಳಾದರೋ ಬೃಂದಾವನದಲ್ಲಿ ಕೃಷ್ಣನನ್ನು ತಡೆದು ನಿಲ್ಲಿಸಿಯಾಳೋ ಎಂಬ ಹಂಬಲ. ಅವಳನ್ನೇ ಹುಡುಕಿ ಹೊರಟಿತು ಅಬಲಾವೃಂದ. ಅವಳನ್ನು ಕಂಡು ನಡೆದುದನ್ನೆಲ್ಲಾ ಹೇಳಿಕೊಂಡು ಬಿಕ್ಕುವ ಸಖಿಯರಿಗೆ ರಾಧೆಯ ಉತ್ತರವೇನು? "ಹೊರಟನೇ ನಗರಕೆ ಹೊರಟನೇ? ಏಗೆಯ್ವೆ ಏಗೆಯ್ವೆನಾ, ಎನ್ನಹರಿಯನ ಬಲ್ಲೆ ನಾ, ಒಮ್ಮೆ ಮನಮಾಡೆ ಬದಲಿಸನವನು". ಹರಿ ಹೃದಯವನ್ನು ಚೆನ್ನಾಗಿ ತಿಳಿದವಳಲ್ಲವೆ? ಇನ್ನು ಅವನನ್ನು ತಡೆಯಲು ಸಾಧ್ಯವೆ? ವೀರೋಚಿತ ಆಹ್ವಾನ. ನಂದನ ಒಪ್ಪಿಗೆ ಬೇರೆ ಇದೆ. "ಕೊಳಲೊಗೆದು ಕೆಳೆ ತೊರೆದು ನಗರದ ಕಡೆ ಮನ ಮಾಡಿಹನ ಬಗೆ ಬೇರೆ" ಎಂದು ಸುಯ್ದು ರಾಧೆ ಮೂರ್ಛೆ- ಎಚ್ಚರಗಳ ನಡುವೆ ತುಯ್ಯಲಾಡಿದಳು. ಮರು ಹಗಲಲ್ಲಿ ಉಳಿದ ತರುಣಿಯರ ಮುತ್ತಿಗೆ ಆಕ್ರಂದನಗಳಲ್ಲೂ ಪಾಲುಗೊಳ್ಳದೆ ದೂರವೇ ಉಳಿದಳು ರಾಧೆ. ಗೋಕುಲದಿಂದ ಅಕ್ರೂರನ ರಥ ಬಹುದೂರ ಹೊರಟಾಗ ಕೃಷ್ಣನಿಗೆ ಕೇಳಿತು ಆಕೆಯ ಚೀತ್ಕಾರ. "ಹರಿ ಹರೀ ಕೃಷ್ಣ ಕೃಷ್ಣಾ ನೋಡಿತ್ತ ರಾಧೆ ನಾ.... ನಿಲ್ಲು ತುಸ ನಿಲ್ಲು ಎಂಬ ಉದ್ವೇಗದ ಅಳಲು". ಹರಿಯ ಮನ ಉಕ್ಕಿ ರಾಧೇ ಎನ್ನುತ್ತ ರಥದಿಂದಲೇ ಧುಮ್ಮಿಕ್ಕಲು ಹೊರಟವನನ್ನು ಬಲರಾಮ ಹೇಗೋ ತಡೆದ. ಓಡಿಬಂದ ರಾಧೆ ಕೊರಳ ಹವಳದ ಹಾರವನ್ನು ಹರಿಯೆದೆಗೆ ಎಸೆದು ಬಿಡುತ್ತಾಳೆ. ಅದನ್ನು ಮೋಹದಿಂದ ತುಟಿಗೊತ್ತಿ ಕಣ್ಣೀರಾದ ಕೃಷ್ಣ ವೈಜಯಂತಿಮಾಲೆಯೊಡನೆ ತನ್ನ ಮುತ್ತಿನೇಕಾವಳಿಯನ್ನು ಅವಳತ್ತ ಎಸೆಯುತ್ತಾನೆ. ಆತು ಕೊಳ್ಳಲು ಧಾವಿಸಿ ಮುಗ್ಗರಿಸುತ್ತಾಳೆ ರಾಧೆ. ರಥ ಗೋಕುಲದತ್ತ ಧಾವಿಸುತ್ತದೆ. ಶೀನ ಕೆಂಧೂಳು ಗೋಕುಲವನ್ನು ಕವಿದುಬಿಡುತ್ತದೆ. ಅಂದಿನಿಂದಲೇ ರಾಧೆ ಚಿರವಿರಹಿ. ಬೃಂದಾವನದ ರಾಸ-ರಾದೆ ಬರಿ ಕನಸು. ಭಾವುಕ ಕವಿ ಸಹೃದಯರ ಚಿರನೂತನ ವಿರಹದುನ್ಮಾದ, ಉನ್ಮೋದ. ಪು.ತಿ.ನ. ಅವರ ಶ್ರೀಹರಿಚರಿತೆಯ ರಾಧೆಯಲ್ಲಿ ಜಯದೇವನ ಉಸಿರು ಆಡುತ್ತಿದ್ದರೂ ಅವಳು ಸರ್ವತಂತ್ರ ಸ್ವತಂತ್ರ ಅಸ್ತಿತ್ವವನ್ನೂ ವ್ಯಕ್ತಿತ್ವವನ್ನೂ ಪಡೆದು ಬೆಳೆದು ನಿಂತಿದ್ದಾಳೆ. ಮಾಧವ ಸ್ಮರಣೆಯಂತೆಯೇ ರಾಧೆಯನಾಮ ಚಿಂತನದಿಂದಲೂ ಮನಸ್ಸು ಆರ್ದ್ರವಾಗುತ್ತದೆ. ರಾಧಾಮಾಧವ ವಿಲಾಸದಂತೆ ರಾಧಾಮಾಧವ ವಿಯೋಗವೂ ಭಾವುಕನ ಮನಸ್ಸನ್ನು ಶುಚಿಗೊಳಿಸಿ ಬಿಡುತ್ತದೆ. ಪು.ತಿ.ನ. ಅವರ ರಾಧೆ ಚೆಲುವೆ, ಸೊಬಗಿ ಮಾತ್ರವಲ್ಲ ಸೂಕ್ಷ್ಮಸಂವೇದನೆಯ ಉತ್ಕಟ ಸಮರ್ಪಣೆಯ "ಹೊಸಬಿ" ಎನಿಸಿ ಬಿಡುತ್ತಾಳೆ.

# ಕನ್ನಡ ಕಾದಂಬರಿಯ ಪರಂಪರೆಯಲ್ಲಿ ಅವಧೇಶ್ವರಿಯ ಸ್ಥಾನ

ಕೆ. ಸತ್ಯನಾರಾಯಣ

ಈ ಲೇಖನದಲ್ಲಿ ಮೂರು ಭಾಗಗಳನ್ನು ಮಾಡಿಕೊಂಡು ಕೃತಿಯ ಬಗ್ಗೆ ಚರ್ಚಿಸಲಾಗಿದೆ. ಮೊದಲ ಭಾಗ ಕೃತಿಯ ಆಶಯವನ್ನು ಕುರಿತದ್ದಾಗಿದೆ. ಎರಡನೆ ಭಾಗದಲ್ಲಿ ಆಶಯವು ಕಾದಂಬರಿಯ ಸ್ವರೂಪ ಮತ್ತು ವಿನ್ಯಾಸದ ಮೇಲೆ ಬೀರಿರುವ ಪರಿಣಾಮವನ್ನು ವಿವರಿಸಲಾಗಿದೆ. ಮೂರನೆಯ ಭಾಗದಲ್ಲಿ ನಮ್ಮ ಕಾದಂಬರಿ ಪರಂಪರೆಯಲ್ಲಿ 'ಅವಧೇಶ್ವರಿ'ಯ ಸ್ಥಾನವೇನು ಎನ್ನುವುದನ್ನು ನೋಡಲಾಗಿದೆ. ಈ ಮೂರು ಭಾಗಗಳು ಒಂದಕ್ಕೊಂದು ಪೂರಕವಾಗಿವೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ. ವಿಶೇಷವಾಗಿ ಮೊದಲ ಎರಡು ಭಾಗಗಳು.

೧

## ಕಾದಂಬರಿಯ ಆಶಯ

ಕಾದಂಬರಿಯ ಮುಖ್ಯ ಆಶಯ ಕ್ಷಾತ್ರಮೌಲ್ಯಗಳ ಆರಾಧನೆ ಮತ್ತು ಆ ಮೌಲ್ಯಗಳ ಪ್ರಥಕ್ಕರಣ. ಈ ಪ್ರಥಕ್ಕರಣದ ಮುಖ್ಯ ನೆಲೆ ವ್ಯಕ್ತವಾಗುವುದು ಶಕ್ತಿ ಅಥವಾ ಬಲದ ಆರಾಧನೆಯಲ್ಲಿ. ಇದು ರಾಜ್ಯದ ಬಲದ ಆಸೆಯಾಗಬಹುದು, ರಾಜ್ಯ ಆಳುವವರ ಶಕ್ತಿ ಹೆಚ್ಚಲಿ, ಅವರು ಇನ್ನೂ ಸಾಮರ್ಥ್ಯವಂತರಾಗಲಿ ಎಂಬ ಆಸೆಯಾಗಬಹುದು. ಈ ಶಕ್ತಿ ಅಥವಾ ಬಲದ ಆರಾಧನೆಗೆ ಅಥವಾ ಅವುಗಳ ಹೆಚ್ಚಳದ ಬಯಕೆಗೆ ಯಾವ ಲೋಕ ಕಲ್ಯಾಣಕಾರವಾದ ಉದ್ದೇಶಗಳು ಇರುವುದಿಲ್ಲ. ತನ್ನಷ್ಟಕ್ಕೇ ತಾನೇ ತೃಪ್ತಿಪಟ್ಟುಕೊಳ್ಳುವುದಕ್ಕೆ ಈ ಶಕ್ತಿ ಬೇಕು, ಈ ಬಲ ಬೇಕು. ಇರುವುದನ್ನು ಕಾಯುವ, ಈಗಿರುವುದನ್ನು ಇನ್ನಷ್ಟು ಬಲದಿಂದ

ನಿಯಂತ್ರಿಸುವುದಕ್ಕೆ ಶಕ್ತಿ ಬೇಕು. ಶಕ್ತಿ ಹೆಚ್ಚಬೇಕು. ಈ ಶಕ್ತಿಗೆ, ಈ ಶಕ್ತಿಯ ಆರಾಧನೆಗೆ ಕನಸುಗಳಿಲ್ಲ, ಪ್ರೀತಿಯಿಲ್ಲ.

ಅವಧೇಶ್ವರಿ ಈ ಕ್ಷಾತ್ರ ಮೌಲ್ಯಗಳ ಆರಾಧನೆಯಲ್ಲಿ ರೂಪಿತವಾಗಿರುವುದು. ಮೊದಲನೆಯ ಪುಟದಲ್ಲಿ ಬರುವ ಈ ವಾಕ್ಯವನ್ನು ಗಮನಿಸಿ :

"ತನ್ನ ವರ್ಚಸ್ಸಿನಿಂದ ಅಣ್ಣ-ಗಂಡನ ರಾಜ್ಯ ಸೂತ್ರಗಳನ್ನು ಭದ್ರವಾಗಿ ಕೈಯಲ್ಲಿ ಇರಿಸಿಕೊಂಡು ನಿಜವಾದ ರಾಜ್ಞಿಯಂತೆ ಆಳುತ್ತಿದ್ದಳು" (ಪುಟ ೯).

ಕಾದಂಬರಿಯ ಕೊನೆಕೊನೆಯಲ್ಲಿ ಇನ್ನೊಂದು ವಾಕ್ಯ ಬರುತ್ತದೆ. ಎಲ್ಲ ಯುದ್ಧತಂತ್ರ, ನಿಯೋಗ, ಸನ್ನಾಹಗಳ ಕೊನೆ ಮತ್ತೇನೂ ಅಲ್ಲ : "ಅಯೋಧ್ಯೆಯನ್ನು ಒಂದು ಸ್ಥಿಮಿತಕ್ಕೆ ತಂದನು (ಪು. ೩೫೬). ಇವೆರಡು ನಾಂದಿವಾಕ್ಯ, ಭರತವಾಕ್ಯಗಳು ಆಕಸ್ಮಿಕದ ಸಂಗತಿಗಳಲ್ಲ ಎನ್ನುವುದಕ್ಕೆ ಪುಟ ೨೬೨ರಲ್ಲಿ ಬರುವ ತಾರ್ಕ್ಷ್ಯನ ಪ್ರತಿಜ್ಞೆಯನ್ನು ಗಮನಿಸಬಹುದು :

"ಅಯೋಧ್ಯೆಯು ರಾಜಮನೆತನ ಸ್ಥಿರವಾಗುವಂತೆ ಮಾಡಬೇಕು. ಅದೇ ನನ್ನ ಧರ್ಮ."

ಮೇಲಿನ ವಾಕ್ಯಗಳಿಂದ ಒಂದು ಮಾತು ಸ್ಪಷ್ಟ; ಕಾದಂಬರಿಯ ಮುಖ್ಯ ನೆಲೆ ಕಾಯ್ದುಕೊಳ್ಳುವುದು ಮತ್ತು ಆಳುವುದು. ಇಲ್ಲಿ ಒಂದು ಪ್ರಶ್ನೆ; ಇದು ಆ ಕಾಲದ ರಾಜಧರ್ಮದ ಆಶಯದ ಚಿತ್ರಣವೆ, ಅದನ್ನು ಪ್ರಥಕ್ಕರಿಸುವುದರ ಮೂಲಕ ಲೇಖಕರೇನಾದರೂ ಹೊಸ ತೀರ್ಮಾನಗಳಿಗೆ ಬರುತ್ತಿದ್ದಾರೆಯೇ ಅಥವಾ ಆ ಕಾಲದ ರಾಜಧರ್ಮದ ನೆಲೆಯನ್ನು 'ಸ್ವೀಕೃತ' ಮತ್ತು 'ಮಾನ್ಯ'ವೆಂದು ಬಗೆದು ಕಾದಂಬರಿ ರಚಿಸಿದ್ದಾರೆಯೆ ?

ಕಾದಂಬರಿಯ ನಿರೂಪಣಾ ತಂತ್ರವನ್ನು ನೋಡಿದರೆ ಮೊಖಾಶಿಯವರ ನಿಜವಾದ ಆಸಕ್ತಿ ಎಲ್ಲಿ ಎಂಬುದು ಗೊತ್ತಾಗುತ್ತದೆ. ಮೇಲುನೋಟಕ್ಕೆ ಸರ್ವಸಾಕ್ಷಿ ಪ್ರಜ್ಞೆಯ ನಿರೂಪಣಾ ತಂತ್ರವನ್ನು ಅನುಸರಿಸಿ ಬರೆದಂತೆ ಕಾಣುವ ಈ ಕಾದಂಬರಿ ಆಳದಲ್ಲಿ ನಿಜಕ್ಕೂ ಬೇರೆಯ ಧ್ವನಿಯನ್ನು ಹೊಂದಿದೆ, ಸರ್ವಸಾಕ್ಷಿ ಪ್ರಜ್ಞೆಯ ನಿರೂಪಣಾ ತಂತ್ರದಿಂದ ಕಾದಂಬರಿಗೆ ಬರುವ ಬೇರೆ ಬೇರೆ ಧ್ವನಿಗಳು, ವೈವಿಧ್ಯ, ಆಳ, ವಿಭಿನ್ನ ರೀತಿಯ ಪಾತ್ರಗಳು ಮತ್ತು ಅವುಗಳ ದೃಷ್ಟಿಕೋನ ಇವು ಈ ಕಾದಂಬರಿಯಲ್ಲಿ ಸಿಗುವುದಿಲ್ಲ. ಬದಲಾಗಿ ಕಾದಂಬರಿ ಎರಡು ನೆಲೆಗಳಲ್ಲಿ ಹೊಯ್ದಾಡುತ್ತಿರುತ್ತದೆ. ಒಂದು, ಈಗಾಗಲೇ ಸೂಚಿಸಿರುವಂತೆ ರಾಜಧರ್ಮದ ಆಶಯಗಳ ಮೂಲಕವೆ ಎಲ್ಲವನ್ನೂ ನೋಡುವುದು. ಮತ್ತೊಂದು, ಮಾನಸಿಕ ದೈಹಿಕ ವಿಕಾರಗಳನ್ನು ಕುರಿತದ್ದು. ಪುರುಕುತ್ಸನ ಲಂಪಟತನವಿರಬಹುದು, ಸಂತೋಷ ಪಡೆಯಲಾಗದೆ ಕರ್ತವ್ಯ ಪ್ರಜ್ಞೆಯ ಮೂಲಕವೆ ಕಾಮವನ್ನು ಗ್ರಹಿಸಬೇಕಾದ ಮತ್ತು ಅನುಭವಿಸಬೇಕಾದ ಅವನ ತಂಗಿಯಿರಬಹುದು. ಸಿಂಹಭಟ್ಟನ ಹುಚ್ಚು, ಇಸ್ನುಳಿದ ಬ್ರಾಹ್ಮಣರ ಈರ್ಷೆಯಿರಬಹುದು. ಎಲ್ಲವೂ ಒಂದಲ್ಲ ಒಂದು ರೀತಿಯ ವಿಕಾರಗಳೇ.

ಈ ವಿಕಾರಗಳನ್ನು ನೋಡುವ, ಮೊಖಾಶಿಯವರ ದೃಷ್ಟಿಕೋನ ಮೊಖಾಶಿಯವರಲ್ಲಿ ನಿಸ್ಸಂದೇಹವಾಗಿ ರಾಜಧರ್ಮದ್ದೆ. ಖಾಂಡೇಕರರ ಯಯಾತಿ, ಮಾಸ್ತಿಯವರ ಚಿಕವೀರ ರಾಜೇಂದ್ರ ಈ ಕಾದಂಬರಿಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ವಿಕಾರವನ್ನು ಶೋಧಿಸುವ, ಮೀರುವ ಪ್ರಯತ್ನವಿದೆ. ಅಂತಹ ಪ್ರಯತ್ನಗಳ ವ್ಯಾಖ್ಯಾನವಿದೆ. ಆದರೆ ಅದನ್ನು ನಿರ್ವಹಿಸುವ ದೃಷ್ಟಿ ರಾಜಧರ್ಮದ್ದಲ್ಲ. ಕಾದಂಬರಿಯ ಎರಡು ಮುಖ್ಯ ಘಟನೆಗಳಾದ ಸಿಂಹಭಟ್ಟನ ಹುಚ್ಚು ಮತ್ತು ತ್ರಸದಸ್ಯು ತನ್ನ ಹುಟ್ಟಿನ ಬಗ್ಗೆ ಅನುಭವಿಸುವ ದ್ವಂದ್ವ ಇವುಗಳು ಮಂಡಿಸಲ್ಪಟ್ಟಿರುವ ರೀತಿಯಲ್ಲಿ ದೃಷ್ಟಿಯನ್ನು ಪರಿಶೀಲಿಸಬಹುದು. ಸಿಂಹಭಟ್ಟ ಒಬ್ಬ ಸಾಮಾನ್ಯ ಬ್ರಾಹ್ಮಣ. ಎಲ್ಲವನ್ನು ತನ್ನನ್ನು ಕಾಯ್ದುಕೊಳ್ಳುವುದಕ್ಕೆ ಉಪಯೋಗಿಸುವ ರಾಜಸತ್ತೆ ಕಾಮವನ್ನು ಕೂಡ ಉಪಯೋಗಿಸಿಕೊಳ್ಳುತ್ತದೆ. ಸಿಂಹಭಟ್ಟನಿಗೆ ಅವನ ಕೌಟುಂಬಿಕ ಹಿನ್ನೆಲೆಯಲ್ಲಿ ಸುಲಭವಾಗಿ ಸಿಗದಿರುವಂತಹ ಸುಖ ರುಚಿಯನ್ನು ತೋರಿಸಿ ನಂತರ ಅವನು ಮತ್ತೆ ಪೂರ್ವಾಶ್ರಮಕ್ಕೆ ಹೋಗಬೇಕೆಂದು ಇಷ್ಟಪಡುವುದು ಕೂಡ ಒಂದು ರೀತಿಯ ಬಲಾತ್ಕಾರವೆ ತಾನೆ? ಇಂತಹ ಪ್ರಶ್ನೆಯನ್ನು ಕೇಳಿಕೊಳ್ಳಲು ಕೂಡ ನಮ್ಮೊಳಗೆ ಒಂದು ರೀತಿಯ ಪ್ರತಿರೋಧ ಜಾಗ್ರತವಾಗುತ್ತದೆ. ಈ ಪ್ರತಿರೋಧ ಏಕೆ ಎಂದು ವಿಚಾರಿಸಿಕೊಂಡರೆ ನಮ್ಮ ಅನುಕಂಪವೆಲ್ಲ ಪುರುಕುತ್ಸಾನಿಯ ಕಡೆಗಿರುವುದು ಗೊತ್ತಾಗುತ್ತದೆ. ಹೌದು! ಎಷ್ಟೇ ಆದರೂ ಅವಳು ರಾಣಿ, ಪಾಪ, ಗಂಡನಿಂದ ಮಗ ಸಿಗಲಿಲ್ಲ. ಎಷ್ಟೊಂದು ಚೆನ್ನಾಗಿ ರಾಜ್ಯ ಆಳುತ್ತಿದ್ದಾಳೆ. ಕೇವಲ ರಾಜ್ಯವನ್ನು ಉಳಿಸುವುದಕ್ಕಾಗಿ, ಉತ್ತರಾಧಿಕಾರಿಯನ್ನು ಹುಡುಕುವುದಕ್ಕಾಗಿ ನೇಮಕವಾದ ಒಬ್ಬ ಸಾಮಾನ್ಯ ವ್ಯಕ್ತಿ ಅಲ್ಲಿ ಮನುಷ್ಯ ಸಹಜವಾದ ಆಸೆ ದೌರ್ಬಲ್ಯಗಳನ್ನು ರೂಢಿಸಿಕೊಂಡು ಮನೋವಿಕಾರಕ್ಕೊಳಗಾಗಿ ನರಳಿದರೆ ರಾಣಿಯದೇನು ತಪ್ಪು, ನಿಯೋಗದ್ದೇನು ತಪ್ಪು.

ಸ್ವಲ್ಪ ತಮಾಷೆಯಾಗಿ ಕಾಣುವ ಮೇಲಿನ ಮಾತುಗಳಲ್ಲಿ ರಾಜಧರ್ಮ ಒಬ್ಬ ಮನುಷ್ಯನನ್ನು ಗ್ರಹಿಸುವ ರೀತಿ ಕೂಡ ಸೂಚಿತವಾಗಿದೆಯೆಂದೆ ನಾನು ತಿಳಿಯುತ್ತೇನೆ. ಪ್ರತಿಯೊಬ್ಬ ವ್ಯಕ್ತಿಗೂ ಒಂದು 'ಪಾತ್ರ'ವಿದೆ; 'ಸ್ಥಾನ'ವಿದೆ; 'ಕರ್ತವ್ಯ'ವಿದೆ. ಅದನ್ನು ಅವನು ನಿರ್ವಹಿಸಬೇಕೆ ವಿನಹ ತನಗೇ ಖಾಸಗಿಯಾದ, ವಿಶಿಷ್ಟವಾದಂತಹ ದೌರ್ಬಲ್ಯಗಳಿಗೆ, ಆಸೆಗಳಿಗೆ ಒಳಗಾಗಬಾರದೆಂದು ಹೇಳುವುದೇ ಈ ಈ ಸೂಚನೆಯ ತಿರುಳು. ಸಿಂಹಭಟ್ಟನ ಹುಚ್ಚು, ವಿಕಾರಗಳನ್ನು ನೋವೇ ಇಲ್ಲದ ಒಂದು ನಿರ್ಲಿಪ್ತ ಭಾಷೆಯಲ್ಲಿ ಹೇಳುತ್ತಾ ಹೋಗುವುದನ್ನು ಗಮನಿಸಿ; [ಪು. ೬೯-೭೩ರಲ್ಲಿ ಎರಡು ಪ್ಯಾರಾದಷ್ಟು ಬರವಣಿಗೆ ಈ ರೀತಿಯ ನಿರ್ಲಿಪ್ತ ಬರವಣಿಗೆಗೆ ಮೀಸಲಾಗಿದೆ]. ನನ್ನ ಅಸಮ್ಮತಿ ಇರುವುದು ಸಿಂಹಭಟ್ಟನಂತವನು ಇರುತ್ತಾನೋ ಇಲ್ಲವೋ ಎಂಬ ವಿಷಯದ ಮೇಲಲ್ಲ. ನಿಜಜಗತ್ತಿನಲ್ಲಿ ಅಂತಹವರು ಇರಲೂ ಬಹುದು. ಆದರೆ ಲೇಖಕರು ತಾವು ಅದನ್ನು ಕಂಡು ನಮಗೆ ಒಪ್ಪಿಸುವ ದೃಷ್ಟಿ

ಮಾತ್ರ ರಾಜಧರ್ಮದ ಆಶಯಗಳಿಗೆ ಬದ್ಧವಾದ್ದು. ವ್ಯಕ್ತಿಯ ಅನನ್ಯತೆಯನ್ನು ನಿರಾಕರಿಸುವಂತದ್ದು. ಮಾಸ್ತಿಯವರ ಚಿಕವೀರರಾಜೇಂದ್ರ ತನ್ನೆಲ್ಲ ದೌರ್ಬಲ್ಯ ಗಳು ವಿಕಾರಗಳೊಡನೆಯೆ ನಮ್ಮಂತೆ ಎಲ್ಲೋ ಒಬ್ಬ ಮನುಷ್ಯನಿರಬೇಕೆಂದು ಅನ್ನಿಸಿದರೆ ಸಿಂಹಭಟ್ಟ ಕೊನೆಗೂ ನಮಗೆ ಬೇರೆಯವನಾಗಿಯೆ ಕಾಣುತ್ತಿರುತ್ತಾನೆ. ಏಕೆಂದರೆ ಕಾದಂಬರಿ ಅವನನ್ನು ರಾಣಿಯ ದೃಷ್ಟಿಯಿಂದ, ರಾಜಧರ್ಮದ ದೃಷ್ಟಿ ಯಿಂದ ನೋಡುವುದಕ್ಕೆ ನಮ್ಮನ್ನು ಸಿದ್ಧ ಮಾಡುತ್ತದೆ. ಒಬ್ಬ ಮನುಷ್ಯನನ್ನು ಅವನಿರುವ ಹಾಗೆ, ಅವನಿರುವ ಸ್ಥಿತಿಯಲ್ಲಿ ನೋಡಿದರೆ ನಮಗೆ ದುರಂತ ಕಾಣು ತ್ತದೆ. ಇನ್ನೊಬ್ಬರ ಮೂಲಕ, ಇನ್ನೊಂದು ದೃಷ್ಟಿಯ ಮೂಲಕ ನೋಡಿದಾಗ ಗೋಳು ಗೋಳಾಗಿ, ಗೋಜು ಗೋಜಲಾಗಿ ಕಾಣುತ್ತದೆ. ಮೊಖಾಶಿಯವರದು ಎರಡನೆಯ ಕ್ರಮ.

ತ್ರಸದಸ್ಯುವಿನ ದ್ವಂದ್ವವನ್ನು ಗಮನಿಸೋಣ. ಅವನು ರಾಜಕುಮಾರನಾದ್ದಕ್ಕೆ ಮಾತ್ರ ಅವನ ಹುಟ್ಟಿನ ಬಗ್ಗೆ ಅವನಿಗೆ ಬರುವ ಅನುಮಾನ ಅಸಾಮಾನ್ಯವಾದದ್ದಾ ಗಲು ಸಾಧ್ಯವಿಲ್ಲವಲ್ಲ. ಅವನ ದ್ವಂದ್ವವನ್ನು ತಾರ್ಕ್ಷ್ಯಶ್ರೀ ಮತ್ತು ರಾಣಿ ರಾಜಧರ್ಮದ ಹಿನ್ನೆಲೆಯಲ್ಲಿ ನೋಡುತ್ತಾರೆ. ಅವರಿಬ್ಬರೂ ಹೇಳುವ ಸಮಾಧಾನವಾಗಲೀ ನೀಡುವ ವಿವರಣೆಯಾಗಲೀ ಅವನಿಗೆ ಸಮಾಧಾನ ನೀಡಲಾರದು. ರಾಣಿ–ತಾರ್ಕ್ಷ್ಯಶ್ರೀ ಇಬ್ಬರೂ ಅವನನ್ನು ಕರ್ತವ್ಯದ, ರಾಜಮನೆತನವನ್ನು ಸ್ಥಿರ ಮಾಡುವ ಯೋಚನೆಯನ್ನು ಹಂಚಿಕೊಂಡು ಗೆಲ್ಲಲು ಪ್ರಯತ್ನಿಸುತ್ತಾರೆ. ರಾಣಿಯ ಪಾತ್ರದ ಇದುವರೆಗಿನ ಬೆಳವಣಿಗೆಯಲ್ಲಿ ಅವಳು ಕಂಡುಕೊಂಡ ಪಡೆದ ರಾಜಕಾರ್ಯದ ಯಶಸ್ಸಿನ ಹಿನ್ನೆಲೆ ಯಲ್ಲಿ ತ್ರಸದಸ್ಯುವಿನ ದ್ವಂದ್ವ ನಮಗೆ ಅನಗತ್ಯವಾಗಿ, ಅನುಕಂಪಕ್ಕೆ ಅರ್ಹವಲ್ಲ ದ್ದಾಗಿ ಕಾಣುತ್ತದೆ. ಪಾಪ, ಅವನು ಸತ್ಯವನ್ನು ಒಪ್ಪಿಕೊಳ್ಳುವ ಕ್ರಮ ಕೂಡ ನಾಟಕೀಯವಾಗಿದೆ. ಉದ್ವೇಗದ ವಾತಾವರಣದಲ್ಲಿ ತಾಯಿಗೆ ಅರಿಷಿಣವನ್ನು ಸವರಿಬಿಡುತ್ತಾನೆ. ಸತ್ಯ ತಿಳಿದ ನಂತರ ಅವನು ಹೇಗೆ ಯೋಚಿಸಿದ, ತಿಳಿಯುವುದೇ ಇಲ್ಲ. ಏಕೆಂದರೆ ತಾರ್ಕ್ಷ್ಯಶ್ರೀ (ಅಥವಾ ಮೊಖಾಶಿ) ಅವನಿಗೆ ಎಂಟು ಗುಳಿಗೆಗಳನ್ನು ತಿನ್ನಿಸಿ ನಿದ್ರೆ ಮಾಡಿಸಿ ತಾನು ಆಲೋಚಿಸಲು ಪ್ರಾರಂಭಿಸುತ್ತಾನೆ. ಅವೆಲ್ಲವು ತ್ರಸದಸ್ಯುವಿನ ಯೋಚನೆಯನ್ನು ಗಣ್ಯವಾಗಿ ಕಾಣುವ, ರಾಜಧರ್ಮದ ಆಶಯ ಗಳನ್ನು ಕಾಯುವ ಆಸೆಯಿಂದ ಪ್ರೇರಿತವಾದ ಆಲೋಚನೆಗಳಾಗಿರುತ್ತವೆ.

ಘಟನಾ ಪ್ರಧಾನವಾದ ಈ ಕಾದಂಬರಿಯಲ್ಲಿ ಘಟನೆಗಳು, ವಿವರಗಳು ಜೋಡಿಸಿರುವ ರೀತಿ ಮತ್ತು ನನ್ನ ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ಒಂದು ಅಂಶ ಸ್ಪಷ್ಟವಾಗುತ್ತದೆ; ಸರ್ವ ಸಾಕ್ಷಿಪ್ರಜ್ಞೆಯ ತಂತ್ರ ಕೇವಲ ಕಾದಂಬರಿಯನ್ನು ಬರೆಯುವ ತಂತ್ರವಾದಾಗ—ಜೀವನವನ್ನು ನೋಡುವ ದೃಷ್ಟಿಕೋನವಾಗದೆ ಹೋದಾಗ ಕೇವಲ ಒಂದೆರಡು ಪಾತ್ರಗಳ, ಆಶಯಗಳ ದೃಷ್ಟಿಕೋನದ ಹಿನ್ನೆಲೆ

ಯಲ್ಲಿ ಮಾತ್ರ ಇನ್ನುಳಿದ ಪಾತ್ರಗಳ ತಾಕಲಾಟವನ್ನು, ಘಟನೆಗಳನ್ನು ನೋಡ ಬೇಕೆನ್ನುವ ವಿಶ್ಲೇಷಿಸುವ ಒತ್ತಾಯ ನಮ್ಮಲ್ಲಿ ಹುಟ್ಟುತ್ತದೆ.

೨

ಕಾದಂಬರಿಯ ಆಶಯವು–ಕೃತಿಯ ಸ್ವರೂಪದ ಮೇಲೆ ಬೀರಿರುವ ಪರಿಣಾಮ

ಈ ರಾಜಧರ್ಮದ ದೃಷ್ಟಿಕೋನವನ್ನು ಲೇಖಕರು 'ಗೃಹೀತ'ವೆಂದು ಸ್ವೀಕರಿಸಿರುವುದರಿಂದ ಕಾದಂಬರಿಯ ವಸ್ತು ಮತ್ತು ಸ್ವರೂಪದ ಮೇಲೆ ಆಗಿರುವ ಪರಿಣಾಮವೇನು?

ಮೊದಲನೆಯ ಪರಿಣಾಮವೆಂದರೆ ರಾಜಕೀಯವನ್ನು ಒಂದು Process ಅಥವಾ ಪ್ರಕ್ರಿಯೆಯಾಗಿ ಗ್ರಹಿಸದೆ–ಸಂಸ್ಥಾನದ ಅಥವಾ ಸಾಂಸ್ಥಿಕ ರಾಜಕೀಯದ ಕಡೆಗೆ ಒಲವು ತೋರುವುದು. ಹೀಗಾದಾಗ ಮುಖ್ಯವಾಗುವುದು ವ್ಯವಸ್ಥೆಯ ಕಷ್ಟ ಕೋಟಲೆಗಳು, ಮನುಷ್ಯನ ಕಷ್ಟ ಕೋಟಲೆಗಳಲ್ಲ, ಅದೃಷ್ಟ–ದುರಾದೃಷ್ಟದ ಪ್ರಶ್ನೆಗಳಲ್ಲ. ಆದ್ದರಿಂದಲೇ ಮನುಷ್ಯನ ಒಳತೋಟಿಗೆ ಈ ಕಾದಂಬರಿಯಲ್ಲಿ ಹೆಚ್ಚು ಪ್ರಾಮುಖ್ಯತೆ ಇಲ್ಲ. ನಾಟಕೀಯವೆನ್ನಬಹುದಾದ ಕೆಲವು ಘಟನೆಗಳಿವೆ, ಆಲೋಚನಾ ಸರಣಿಗಳಿವೆ. ಆದರೆ ನಮ್ಮ ಅಂತರಂಗವನ್ನೆ ಕಲಕುವಂತಹ ಒಳತೋಟಿಗಳಿಲ್ಲ ಇಂತಹ ಒಳತೋಟಿಗಳು ಸಾಧ್ಯವಿರುವಂತಹ ಪ್ರಸಂಗಗಳಲ್ಲಿಲ್ಲ—ಮೇಲೆ ಹೇಳಿದ ಹಾಗೆ ಸಿಂಹಭಟ್ಟನ ಹುಚ್ಚಿನ ಪ್ರಕರಣ, ತ್ರಸದಸ್ಯುವಿನ ದ್ವಂದ್ವ—ಲೇಖಕರ ಉಪಾಯಗಳನ್ನು ದೃಷ್ಟಿಕೋನವನ್ನು ನಾನೀಗಲೇ ಸೂಚಿಸಿದ್ದೇನೆ. ಯುದ್ಧ, ಯುದ್ಧದ ವಿವರಗಳು, ಅದರ ವರ್ಣನೆಗಿರುವಷ್ಟು ಪ್ರಾಮುಖ್ಯತೆ ಮನುಷ್ಯನಿಗೆ ಸಂಬಂಧಪಟ್ಟ ಭೌತಿಕ ವಿವರಗಳಿಗಿಲ್ಲ—ಹಾಗೆಯೇ ದೇವದಾಮಿ ಋಷಿಗಳ ಕಾರ್ಯತಂತ್ರದ ವರ್ಚಸ್ಸಿನ ವಿವರಣೆ ಸಿಗುತ್ತದೆಯೇ ಹೊರತು ಆಶ್ರಮದ ವರ್ಣನೆ ವಿವರಗಳು ಸಿಗುವುದಿಲ್ಲ—

ಕಾದಂಬರಿ ಮಾಧ್ಯಮಕ್ಕೆ ಸಂಕೀರ್ಣತೆ ಬರುವುದೆ ಅದು ಒಂದು ಕಾಲಘಟಕವನ್ನು ಮನುಷ್ಯನ ಮೂಲಕ ನೋಡಬಲ್ಲದು ಎಂಬ ಕಾರಣದಿಂದ. ನೀವು ಮನುಷ್ಯನ ಮೂಲಕ ಒಂದು ಕಾಲಘಟಕವನ್ನು ಗ್ರಹಿಸಲು ಹೊರಟಾಗ ನೀತಿ–ಅನೀತಿ, ಸರಿ–ತಪ್ಪುಗಳ ಪ್ರಶ್ನೆಯನ್ನು ಮೀರಿದ ಪ್ರಕ್ರಿಯೆಗೆ ಒತ್ತು ಕೊಡುತ್ತೀರಿ. ವ್ಯವಸ್ಥೆಯ ಮೂಲಕ ಗ್ರಹಿಸಲು ಹೊರಟಾಗ ಕ್ರಿಯೆ, ಉದ್ದೇಶ, ನೀತಿ ಇವೆಲ್ಲವು ಮುಖ್ಯವಾಗುತ್ತವೆ. ಅಯೋಧ್ಯೆಯ ವ್ಯವಸ್ಥೆಯನ್ನು ಕಾಯುವುದು ಸರಿಯೋ ತಪ್ಪೋ ಎಂಬ ಪ್ರಶ್ನೆ ನಮಗೆ ಹುಟ್ಟುವುದೇ ಇಲ್ಲ—ಸಿಂಹಭಟ್ಟನ ಹುಚ್ಚಿನ ಸರಿ–ತಪ್ಪುಗಳ ಪ್ರಶ್ನೆ ಮಾತ್ರ ನಮ್ಮಲ್ಲಿ ಉದ್ಭವವಾಗುವ ಹಾಗೆ ಕಾದಂಬರಿಕಾರರು ನೋಡಿಕೊಳ್ಳುತ್ತಾರೆ.

ಸಂಸ್ಥಾನದ ಸ್ಥಿರತೆಯ, ಮೇಲ್ಮೆಯ ಆಶಯ ಇದೆಯೆಲ್ಲ ಅದು ಇಡೀ ಕಾದಂಬರಿಗೆ ಒಂದು ಕರ್ತವ್ಯ ಭಾರದ ಧ್ವನಿಯನ್ನು ಕೊಡುತ್ತದೆ. ಕಾದಂಬರಿಯ ಧ್ವನಿಯಲ್ಲಾಗಲೀ, ವಿವರದಲ್ಲಾಗಲೀ ಎಲ್ಲೂ ಸಂತೋಷದ ಪುಳಕಗಳ ಸೂಚನೆಯಿಲ್ಲ. ಕರ್ತವ್ಯದ ಭಾರವನ್ನು ಮಾತ್ರ ಸೂಚಿಸುತ್ತೆ. ಯುದ್ಧವು ಕರ್ತವ್ಯವೆ, ಮಗುವನ್ನು ಪಡೆಯುವುದು ಕರ್ತವ್ಯವೆ, ನ್ಯಾಯ ವಿತರಣೆ, ಶಿಕ್ಷೆ ಕೊಡುವುದು ಎಲ್ಲವೂ ಕರ್ತವ್ಯವೆ. ಹಾಗಾಗಿಯೆ ತಾಕ್ಷ್ಯ್ರ ರಾಣಿಗೆ ಸುಖ ನೀಡಿದ ಎಂದು ಹೇಳುವಾಗಲೂ ಅದರ ಸಂಭ್ರಮದ ಸೂಚನೆಯಾಗಲೀ, ವಿವರವಾಗಲೀ ನಮಗೆ ಸಿಗೊಲ್ಲ. ತಾಕ್ಷ್ಯ್ರನ ಜೊತೆ ಕೂಡುವಾಗಲೂ ಆಜ್ಞೆಯ, ಕರ್ತವ್ಯದ ಅಂಶ [Imperative tone] ಬೆರೆತಿರುತ್ತದೆ. 'ನೋಡುವ-ಬಾ!' (ಪು. ೩೧೭). ಈ ಮಿಲನಕ್ಕೆ ಮುಂಚೆ ಕೂಡ ಯುದ್ಧ ತಂತ್ರದ ವರ್ಣನೆಯೆ. ಪುರುಕುತ್ಸನಿ ಕಾದಂಬರಿಯ ಈ Imperative Tone ನ ಪ್ರತಿರೂಪ. ಅವಳಿಗೆ ಎಲ್ಲವು ಕರ್ತವ್ಯವೆ. ಪರಮ ಸಂತೋಷ ನೀಡಬಲ್ಲ ಕಾಮವಿರಬಹುದು, ಯುದ್ಧವಿರಬಹುದು ಎಲ್ಲವೂ ಒಂದೆ. ದುರಂತವೆಂದರೆ—ಸಿಂಹಭಟ್ಟನಿಗೆ ಒಂದೇಸಲ ಹುಚ್ಚು ಹಿಡಿದರೆ, ಇವಳು ಪ್ರತಿಕ್ಷಣವು ತನ್ನನ್ನು ತಾನೇ ರಾಜಧರ್ಮದ ಆಶಯಗಳಿಗೆ ಬಲಿಕೊಟ್ಟುಕೊಳ್ಳುತ್ತಿರುತ್ತಾಳೆ. ಎಲ್ಲವನ್ನೂ ಗೆದ್ದಂತೆ, ಕಾಣುವ ಪುರುಕುತ್ಸನಿ ಈ ಹಿನ್ನೆಲೆಯಲ್ಲಿ ಎಲ್ಲ ಕಡೆಯೂ ಸೋತಂತೆ, ಸುಸ್ತಾದಂತೆ ಕಾಣುತ್ತಾಳೆ. ಒಂದು ಸಂಸ್ಥಾನದ ಸ್ಥಿರತೆಯನ್ನು ಹೇಗೆ ಸಾಧಿಸಲಾಯಿತು ಎಂದು ಹೇಳುವ ಭರದಲ್ಲಿ ಈ ಸೋಲಿಗೆ ದುರಂತದ ಧ್ವನಿಯನ್ನು ನೀಡುವ ವ್ಯವಧಾನವೆ ಕಾದಂಬರಿಗಿಲ್ಲ.

ಇಷ್ಟು ಹೇಳಿದರೂ ಕ್ಷಾತ್ರವೌಲ್ಯಗಳ ಪ್ರತಿಪಾದನೆ ಮತ್ತು ಸಂಸ್ಥಾನದ ದೃಷ್ಟಿಗೆ ಹೊರತಾದ ಒಂದು ಎಳೆ ಕೂಡ ಕಾದಂಬರಿಯಲ್ಲಿ ಇರುವುದನ್ನು ನಾವು ಗಮನಿಸಬೇಕು. ಅದೆಂದರೆ ತಂದೆಯ, Father ನ ಮತ್ತು Father land ನ ಹುಡುಕಾಟ ಮತ್ತು ಕೊನೆಯಲ್ಲಿ ಅದನ್ನು ನಿರಾಕರಿಸುವ ಸಿದ್ಧತೆಯ ಸೂಚನೆ. ಇಡೀ ಅಯೋಧ್ಯೆ-ರಾಜನಿಗಾಗಿ (Father) ಹುಡುಕುತ್ತಿರುತ್ತೆ. ರಾಣಿ ತನ್ನ ಮಗುವಿಗೆ ತಂದೆಯನ್ನು ಹುಡುಕುತ್ತಿರುತ್ತಾಳೆ. ಅವಳ ಮಗ ಪಡೆಯುವ ತಂದೆ (ಸಿಂಹಭಟ್ಟ) ಮತ್ತು ತಂದೆಯೂ ಆಗಬಹುದಾಗಿದ್ದವನು (ಪುರುಕುತ್ಸ) ಆಕಸ್ಮಿಕವೇನೋ ಎಂಬಂತೆ ಒಂದೇ ರೀತಿಯ ವಿಕಾರವನ್ನು ಹೊಂದಿದವರಾಗಿರುತ್ತಾರೆ. ಅಷ್ಟೇ ಏಕೆ ತ್ರಸದಸ್ಯುವನ್ನು ವಿರೋಧಿಸುವ ವೃಶನ ತಂದೆ ಕೂಡ ಒಂದು ರೀತಿಯ ವಿಕಾರದವನೆ. ಎಲ್ಲ ತಂದೆಯರು ಕೊನೆಗೆ ಹೀಗೆ (Father's Concept itself) ಎಂದು ಲೇಖಕರು ಸೂಚಿಸುತ್ತಿದ್ದಾರೆಯೆ—

ಕಾದಂಬರಿಯ ಕೊನೆಯಲ್ಲಿ ವೃಶ ತನ್ನ ಹೆಂಡತಿಯನ್ನು ಅಪ್ಪ ಬೇಡ, ನಿನ್ನದು ಏನು ಅಭಿಪ್ರಾಯ ಅಂತ ಕೇಳ್ತಾನೆ. ಅವನ ಮಗುವಿನ ತಂದೆಯ ಬಗ್ಗೆ ಕೂಡ ಕೊನೆಯಲ್ಲಿ ಅನುಮಾನ ಬರುತ್ತೆ. ಅಸಹ್ಯದಿಂದ ಕಾವ್ಯ ಸುಟ್ಟು, ತನ್ನ

ಹುಟ್ಟಿನ ಸೂಚನೆಗೆ ವಿರೋಧವಾದ ಕ್ಷಾತ್ರವೃತ್ತಿಯನ್ನು ಸ್ವೀಕರಿಸಿ ಮುಂದೆ ಬಂದು ತಂದೆಯಿಲ್ಲದ ಮನೆಯಿಲ್ಲದ ಮನೆಯಲ್ಲಿ—ನೆಲಸುತ್ತಾನೆ.

ಈ ಎಳೆ ಎಷ್ಟೇ ಕುತೂಹಲಕಾರಿಯದ್ದಾದರೂ ಕಾದಂಬರಿಯ ಪ್ರಮುಖ ಆಶಯವಲ್ಲ ಮತ್ತು ಅದರ ಜೊತೆಗೆ ಬೆರೆಯುವುದೂ ಇಲ್ಲ. ಏಕೆಂದರೆ ಕಾದಂಬರಿ ಹೊರಟಿರುವುದು ದರ್ಶನಕ್ಕಲ್ಲ, ಒಂದು ನಿಲುವಿಗೆ ಬಂದು ಮೌಲ್ಯಗಳ ಪರವಾಗಿ ಓದುಗರನ್ನು ಒಪ್ಪಿಸುವುದಕ್ಕೆ.



## ಕನ್ನಡ ಕಾದಂಬರಿ ಪರಂಪರೆಯಲ್ಲಿ 'ಅವಧೇಶ್ವರಿ'ಯ ಸ್ಥಾನ

ನನ್ನ ಈವರೆಗಿನ ವಿವರಣೆಗಳಿಂದಲೆ ಈ ಕಾದಂಬರಿ ಕನ್ನಡ ಕಾದಂಬರಿ ಪರಂಪರೆಯ ಆಶಯಗಳ ಮುಂದುವರಿಕೆ ಅಲ್ಲ ಎಂಬುದು ಧ್ವನಿತವಾಗಬಹುದೆಂದು ತಿಳಿಯುತ್ತೇನೆ. ಈ ಅಂಶವನ್ನೇ ನಮ್ಮ ಕಾದಂಬರಿಯ ಪರಂಪರೆಯ ಮುಖ್ಯ ಆಶಯಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಇನ್ನಷ್ಟು ವಿವರವಾದ ಮಾತುಗಳನ್ನು ಹೇಳಬಹುದೇನೋ.

ಲೇಖಕರು ಇದನ್ನು ರಾಜಕೀಯ ಕಾದಂಬರಿ ಎಂದು ಕರೆದುಕೊಳ್ಳುತ್ತಾರೆ. ಮೊದಲೆ ಸೂಚಿಸಿದ ಹಾಗೆ ಇಲ್ಲಿಯ ರಾಜಕೀಯ ಸಂಸ್ಥಾನದ, ಸಿಂಹಾಸನದ ದೃಷ್ಟಿಯಿಂದ ನೋಡಿ ಬರೆದಿರುವಂತದು. ಹಾಗೆಂದಾಕ್ಷಣಕ್ಕೆ ಸಾಮಾನ್ಯ ಜನರನ್ನು ಕಾದಂಬರಿಯ ಕಕ್ಷೆಯೊಳಗೆ ತರುವುದು ಕಡ್ಡಾಯವೆ ಎಂದು ಕೇಳಬಹುದು. ಆದರೆ ಸಿಂಹಾಸನದ ದೃಷ್ಟಿಕೋನ ಒಂದು ಕಾಲಬಿಂದುವಿನ ಎಲ್ಲ ಸತ್ಯವನ್ನು ಹೇಳುವುದಿಲ್ಲವಲ್ಲ. ಈ ಮಾತು ಹಾಗಿರಲಿ. ನಮ್ಮ ರಾಜಕೀಯ ಕಾದಂಬರಿಗಳು ರಾಜಕೀಯವನ್ನು ಗ್ರಹಿಸುವ ಕ್ರಮ ಹೇಗೆ ಎಂದು ಒಂದೆರಡು ಮಾತು ಹೇಳಿದರೆ. ಈ ಕಾದಂಬರಿಯ ದೃಷ್ಟಿಕೋನ ಚೆನ್ನಾಗಿ ಅರ್ಥವಾಗುತ್ತದೆ. ಮಾಸ್ತಿ, ಅನಂತ ಮೂರ್ತಿ, ಕಾರಂತರ ರಾಜಕೀಯ ಕಾದಂಬರಿಗಳನ್ನು ಗಮನಿಸಬಹುದು. ಕಾರಂತರು ಕಾಲ ಕೆಟ್ಟುಹೋಯಿತಲ್ಲಪ್ಪಾ, ಇಡೀ ದೇಶವೆ ಗೊಂಡಾರಣ್ಯವಾಯಿತಲ್ಲ ಎಂದು ಹಲುಬುತ್ತಾ ಸಿನಿಕಧ್ವನಿಯಲ್ಲಿ ಬರೆದರೂ ಆಳುವ ವರ್ಗದ, ಸಿಂಹಾಸನದ ದೃಷ್ಟಿ ಕೋನವನ್ನೇನು ಒಪ್ಪುವುದಿಲ್ಲ. ಹೆಚ್ಚೆಂದರೆ ನಾವು ಅವರ ರಾಜಕೀಯ ಗ್ರಹಿಕೆಯ ಮಿತಿಯನ್ನು ಪ್ರಶ್ನಿಸಬಹುದು. ಅವರು ನಮ್ಮ ಸಮಕಾಲೀನ ರಾಜಕೀಯ ಜೀವನದಲ್ಲಿ ಆದರ್ಶದ ಅಭಾವವನ್ನು, ಇಳಿಮುಖವನ್ನು ಕುರಿತು ಕೊರಗಿದರು. ಆದರ್ಶವನ್ನು ಬಲದಲ್ಲಿ, ಅಧಿಕಾರದಲ್ಲಿ, ಶಕ್ತಿ ಪ್ರದರ್ಶನದಲ್ಲಿ ಹುಡುಕುವುದಿಲ್ಲವಲ್ಲ!

ಮಾಸ್ತಿ ತಾವು ನಂಬಿದ ನೈತಿಕ ಪರಿಕಲ್ಪನೆಗಳು ರಾಜಕೀಯಸ್ಥರಲ್ಲಿ ಕೆಲಸ ಮಾಡುವ ಬಗೆ ಹೇಗೆ ಎಂದು ಪರಿಶೀಲಿಸುತ್ತಾರೆ. ಅವರಿಗು ಕೂಡ ಸಿಂಹಾಸನ

ಮತ್ತು ಹೆಚ್ಚಿನ ಶಕ್ತಿ ಆದರ್ಶವಲ್ಲ. ಸಿಂಹಾಸನಕ್ಕೆ ಕೂಡ ಮೆರಗು ಬರುವುದು ಮನುಷ್ಯನಿಂದ, ಅವನ ನೈತಿಕ ಶಕ್ತಿಯಿಂದ ಎಂದು ನಂಬುತ್ತಾರೆ. ಇದಕ್ಕಿಂತಲು ಮುಖ್ಯವಾಗಿ ಅವರು ರಾಜಕೀಯವನ್ನು, ಅಧಿಕಾರದ ಸ್ಥಿತ್ಯಂತರಗಳನ್ನು ದಿನನಿತ್ಯದ ಜೀವನದ ಘಟನೆಗಳ ಮೂಲಕವೆ ಗ್ರಹಿಸುತ್ತಾರೆ. ಮೊಖಾಶಿಯವರಲ್ಲಿ ದಿನನಿತ್ಯದ ಜೀವನದ ಘಟನೆಗಳ ವಿವರಗಳು ಬರುವುದು ರಾಜದೃಷ್ಟಿಯಿಂದ ಗೇಲಿಮಾಡುವುದಕ್ಕೆ ಮಾತ್ರ. ವೃಶ, ಅವನ ಅಪ್ಪಂದಿರ ದುರಂತವನ್ನು ವಿವರಿಸುವಾಗ ಮೊಖಾಶಿಯವರ ಬರವಣಿಗೆ ಎಷ್ಟೇ ಸಮರ್ಥವಾಗಿದೆಯೆಂದೆನಿಸಿದರೂ ಆ ಎಲ್ಲ ವಿವರಗಳು, ಒಳನೋಟಗಳು ಅವರ ಬಗ್ಗೆ ನಮ್ಮಲ್ಲಿ ಎಲ್ಲೋ ಒಂದು ರೀತಿಯ ಹಗುರವಾದ ಮನೋಭಾವವನ್ನು, ಗೇಲಿತನವನ್ನು ಪ್ರಚೋದಿಸುತ್ತಿರುತ್ತವೆ.

ಅನಂತಮೂರ್ತಿ ರಾಜಕೀಯವನ್ನು ಮನುಷ್ಯನ ಅದೃಷ್ಟ-ದುರಾದೃಷ್ಟಗಳನ್ನು ಪರೀಕ್ಷಿಸುವ ನಿರ್ಧರಿಸುವ ಭೂಮಿಕೆಯಾಗಿ ಪರಿಗಣಿಸುತ್ತಾರೆ. ದಿನನಿತ್ಯದ ಜೀವನ, ದೈನಿಕ ವಿವರಗಳ ಬಗ್ಗೆ ಇವರ ಗ್ರಹಿಕೆ ಮಾಸ್ತಿಯವರ ಗ್ರಹಿಕೆಗೆ ಹತ್ತಿರವಾಗಿದೆಯೆನ್ನಿಸಿದರೂ ನಾಯಕ ಪ್ರಧಾನವಾದ ಇವರ ಕಾದಂಬರಿಗಳು ರಾಜಕೀಯವನ್ನು ತಾತ್ವಿಕವಾಗಿ ಸಂಕೀರ್ಣವಾಗಿ, ವೈಚಾರಿಕತೆಯ ಎಲ್ಲ ಎಳೆಗಳನ್ನು ಒಳಗೊಳ್ಳುತ್ತಲೇ ಗ್ರಹಿಸುವ ಪ್ರಯತ್ನ ಮಾಡುತ್ತದೆ. ರಾಜಕೀಯವನ್ನು ಅತ್ಯಂತ ಶ್ರೀಮಂತ ಮತ್ತು ಸಂಕೀರ್ಣವಾದ ಅರ್ಥದಲ್ಲಿ ಗ್ರಹಿಸಿ ಪ್ರಥಕ್ಕರಿಸಲು ಇವರ ಕಾದಂಬರಿಗಳು ಪ್ರಯತ್ನಿಸುತ್ತವೆ.

ಅವಧೇಶ್ವರಿ ಯಾವ ಹಿನ್ನೆಲೆಯಲ್ಲಿ ನೋಡಿದರು ನಮ್ಮ ರಾಜಕೀಯ ಕಾದಂಬರಿಗಳ ತಿಳುವಳಿಕೆಯ-ಪರಂಪರೆಯ ಮುಂದುವರಿಕೆಯಲ್ಲ ಎಂಬುದು ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ.

* * *

ಒಂದು ದೃಷ್ಟಿಯಿಂದ ಈ ಕಾದಂಬರಿ ಸದ್ಯ ಚಾಲ್ತಿಯಲ್ಲಿರುವ 'ಸಮಾಜ ಶಾಸ್ತ್ರೀಯ ಮನುಷ್ಯ'ನ ಕಲ್ಪನೆಗೆ ಪೂರಕವಾಗಿದೆ. ಇಲ್ಲಿ ನಮಗೆ Personal Man–ಖಾಸಗಿ ಮನುಷ್ಯನ ದರ್ಶನವೆ ಇಲ್ಲ. ಮನುಷ್ಯನ ಬಾಹ್ಯ ಜೀವನದ ವಿವರಗಳಿಗೆ ಹೆಚ್ಚು ಒತ್ತು, ಅಂತರಂಗದ ಪರಿವೀಕ್ಷಣೆಗಲ್ಲ. ಯಾವ ಪಾತ್ರದ 'ಒಳತೋಟಿ' ಈ ಕಾದಂಬರಿಯಲ್ಲಿ ನಮ್ಮನ್ನು ತಟ್ಟುತ್ತದೆ? ಸ್ವಗತಗಳು, ತಾನೇ ತಾನಾಗಿ ಮೆರೆಯುವ ಈ ಕಾದಂಬರಿಯಲ್ಲಿ ಒಳತೋಟಿಯು ಎಲ್ಲೋ ತಪ್ಪಿಸಿಕೊಂಡಂತಿದೆ.

ಹೂವಯ್ಯನಾಗಲೀ, ರಾಮಐತಾಳನಾಗಲೀ, ಪ್ರಾಣೇಶಾಚಾರ್ಯನಾಗಲೀ ಯಾರೂ ಕೂಡ ಒಂದು ಸಾಮಾಜಿಕ ಘಟಕದ ಪ್ರತಿನಿಧಿಗಳಾಗಿ ನಮಗೆ ಮುಖ್ಯರಾಗುವುದಿಲ್ಲ. ನಮ್ಮ ಅತ್ಯುತ್ತಮ ಕಾದಂಬರಿಗಳು ಯಾವಾಗಲೂ ಸಾಮಾಜಿಕ

ಘಟಕ, ರಚನೆಗಳು ಗುರುತಿಸುವ, ಸ್ವೀಕರಿಸುವ, ಮನ್ನಿಸುವ ಮನುಷ್ಯನ ಆಚೆಗಿಂತಲು ಇರುವ ಮನುಷ್ಯತ್ವದ ಮೂಲ ಮಾದರಿಗಳ ಬಗ್ಗೆಯೆ ನಮಗೆ ಆಸಕ್ತಿ ವಹಿಸುವಂತೆ ಹೇಳಿಕೊಡುತ್ತವೆ. ಇಲ್ಲಿ ಮಾತ್ರ ನಾವು ಪುರುಕುತ್ಸಾನಿಯನ್ನು ರಾಣಿಯೆಂದೆ ಗ್ರಹಿಸಬೇಕಾಗಿದೆ, ಸ್ವೀಕರಿಸಬೇಕಾಗಿದೆ.

ಅವಧೇಶ್ವರಿಯನ್ನು ಓದುವಾಗಲಿಲ್ಲ ನನಗೆ ಮತ್ತೆ ಮತ್ತೆ ಎದುರಾದ ಪ್ರಶ್ನೆ ನಮ್ಮಲ್ಲೇಕೆ ಯಾವ ಗಂಭೀರವಾದ ಕಾದಂಬರಿಕಾರರು ಕಾಲಖಂಡಕ್ಕೆ ಅನುಗುಣವಾದ ಕಾದಂಬರಿಗಳನ್ನು ಏಕೇ ಬರೆಯಲಿಲ್ಲ ಎಂಬುದು (Period Novels). ಪಾಲ್‌ಸ್ಕಾಟ್‌ನ ಕಾದಂಬರಿಗಳನ್ನು ಇದಕ್ಕೆ ಹತ್ತಿರದ ಉದಾಹರಣೆಯಾಗಿ ಪರಿಗಣಿಸಬಹುದು. ಈ ಪ್ರಶ್ನೆ ಮೇಲುನೋಟಕ್ಕೆ ಕಾಣುವಷ್ಟು ಸರಳವಾದುದಲ್ಲ. ಕಾದಂಬರಿ ಮಾಧ್ಯಮ ಕಾಲವನ್ನು ಪ್ರಥಕ್ಕರಿಸುವ ರೀತಿಯನ್ನು ಕುರಿತ ಸಿಲುವೆ ಇಲ್ಲಿ ಅಡಕವಾಗಿದೆಯೆಂದು ನಾನು ತಿಳಿಯುತ್ತೇನೆ. ನಮ್ಮ ಕಾದಂಬರಿಗಳಿಗೆ ಕಾದಂಬರಿಯೊಳಗಿನ ಕಾಲದ ಬಗ್ಗೆ ಹೆಚ್ಚು ಆಸಕ್ತಿಯೆ ಹೊರತು ಚಾರಿತ್ರಿಕ ಕಾಲದ ಬಗ್ಗೆ ಅಲ್ಲ. (Novel Time or Time in the Novel as against historical time or Chranological time). ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ನಮ್ಮ ಕಾದಂಬರಿಕಾರರು ಕಾಲವನ್ನು ಪ್ರಥಕ್ಕರಿಸುವ ಸಮರ್ಥ ಮಾದರಿಯ ಉದಾಹರಣೆಯಾಗಿ ಗಮನಿಸಬಹುದು—ಗುತ್ತಿಯ ಒಂದು ದಿವಸವೆ ಸಾಕು, ಅದೆಷ್ಟು ಶ್ರೀಮಂತವಾಗಿದೆಯೆಂದರೆ, ಧ್ವನಿಪೂರ್ಣವಾಗಿದೆಯೆಂದರೆ, ಇಡೀ ಜೀವನದ ದರ್ಶನವನ್ನೆ ಅಲ್ಲಿ ತೆಗೆದು ನಮ್ಮೆದುರಿಗೆ ಇಡುವ ಶಕ್ತಿಯಿದೆ. ಆ ದಿನಕ್ಕೆ ದಿನಾಂಕವಿಲ್ಲ, ಸಂವತ್ಸರವಿಲ್ಲ. ಅದು Dateless ಮಾತ್ರವೆ ಅಲ್ಲ Timeless ಕೂಡ ಹೌದು. ಹೀಗೆ ಒಂದು ದಿನವನ್ನು ಹಿಂದಿನ ಮತ್ತು ಮುಂದಿನ ಎಲ್ಲ ದಿನಗಳಿಗೂ ಸೇರುವಂತೆ ಗ್ರಹಿಸಬಲ್ಲ ಪರಂಪರೆಗೆ, ವೇದಕಾಲವಾದರೇನು, ಇಪ್ಪತ್ತೊಂದನೇ ಶತಮಾನವಾದರೇನು ಪುರಾಣದ ಕಾಲವನ್ನು ಕಾದಂಬರಿಯ ಲೋಕದೊಳಗೆ ಇಳಿಸಿ ಕಾದಂಬರಿಯ ಕಾಲಕ್ಕೆ ಹೆಚ್ಚು ಮಹತ್ವ ನೀಡಿದ ದೇವುಡು ಅಂಥವರಿದ್ದಾರೆ. ಹೀಗೆ ಕಾಲವನ್ನು ಕಾಲಾತೀತವಾಗಿ ಮಾಡಲಾಗದ ತರಾಸು, ಪುಟ್ಟಸ್ವಾಮಯ್ಯ, ಅಂಥವರ ಕಾದಂಬರಿಗಳು ಕಲಾಕೃತಿಯ ಮಟ್ಟಕ್ಕೆ ಏರಲೇ ಇಲ್ಲ ಎಂಬುದನ್ನು ಕೂಡ ನಾವಿಲ್ಲಿ ನೆನಪಿಸಿಕೊಳ್ಳಬಹುದು. ಮೊರಾಶಿಯವರ ಕಾದಂಬರಿ ಹೀಗೆ ಎಲ್ಲೋ ಪಾಶ್ಚಾತ್ಯರು ಜನಪ್ರಿಯಗೊಳಿಸಿದ 'ಚಾರಿತ್ರಿಕ ಕಾಲ'ದ ಪ್ರಜ್ಞೆಗೆ ಹತ್ತಿರವಿರುವಂತೆ ಭಾಸವಾಗುತ್ತದೆ. ಹೀಗೆ ಹೇಳುವುದು ತಪ್ಪೇನೋ. ವಾಲ್ಟರ್ ಸ್ಕಾಟ್‌ನ ಗೊತ್ತು ಗುರಿಯಿರುವ ದಿನಾಂಕ ಸಂವತ್ಸರ ಕಾದಂಬರಿಗಳಿಗಿಂತ ಕಾಲದ ಪೊರೆಯನ್ನೆ ಕಳಚಿಕೊಳ್ಳಬಲ್ಲ ವಾರ್ ಅಂಡ್ ಪೀಸ್ ಅಂತಹ ಕಾದಂಬರಿಗಳನ್ನೆ ನಾವು ಹೆಚ್ಚು ಇಷ್ಟಪಡುತ್ತೇವಲ್ಲವೆ.

ಕಾಲದ ಕಲ್ಪನೆಯಿರಲಿ, ಮನುಷ್ಯನ ಕಲ್ಪನೆಯ ಪ್ರಶ್ನೆ ಬಂದಾಗಲು ಕೂಡ ಈ ಕಾದಂಬರಿ ನಮ್ಮ ಪರಂಪರೆಗಿಂತ ಭಿನ್ನವಾದುದಾಗಿದೆ. ನಮ್ಮಲ್ಲಿ ಕಾದಂಬರಿ ನಿಜಕ್ಕು ಸಾಮಾನ್ಯ ಮನುಷ್ಯನ ಮಾಧ್ಯಮವೆ. ನಮ್ಮ ಸಾಮಾನ್ಯ ಜನರು ಈ ಸಾಹಿತ್ಯ ಪ್ರಕಾರವನ್ನು ಹೆಚ್ಚು ಓದುತ್ತಾರೆಂಬ ಕಾರಣಕ್ಕಲ್ಲ. ಅವನು ಸರ್ವಥ ವಾಗಿ ಪ್ರತಿನಿಧಿಸಲ್ಪಟ್ಟಿರುವುದು ಈ ಪ್ರಕಾರದಲ್ಲೆ ಎಂಬ ಕಾರಣಕ್ಕಾಗಿ. ಗುತ್ತಿ, ಚೋಮ, ವೆಂಕಟಿಗ, ಸರಸೋತಿ, ನಾಗವೇಣಿ, ಭುಜಂಗಯ್ಯ—ಇಂತಹವರೆ ನಮ್ಮ ಕಾದಂಬರಿ ಲೋಕದ ರಕ್ತನಾಳಗಳಲ್ಲಿ ಹರಿದಾಡಿರುವುದು. ಚೋಮನ ದುಡಿಯ ಬಡಿತದಲ್ಲೆ ಆ ಕಾಲದ ಎಲ್ಲ ಆಕ್ರಂದನಗಳನ್ನು ಕೇಳಿಸಬಲ್ಲ ಶಕ್ತಿ ನಮ್ಮ ಪರಂಪರೆಗೆ ಇದೆ. ನಕಲಿಶಾಮ, ತತ್ವಜ್ಞಾನಿ, ಲೋಲುಪ, ಸಾಹಸಿ ಎಲ್ಲವೂ ಆದ ಭುಜಂಗಯ್ಯ ಯಾವುದೋ ಒಂದು ಕುಗ್ರಾಮದಲ್ಲಿ ಆಧುನಿಕ ಮನುಷ್ಯನ ಮುಖ್ಯ ದ್ವಂದ್ವಗಳಾದ ಅರ್ಥ ಮತ್ತು ಯಶಸ್ಸು, ಮತ್ತು ಜೀವನದಲ್ಲಿ ಅವುಗಳಿಗೆ ಪರಸ್ಪರ ಇರುವ ಸಂಬಂಧವನ್ನು ಹುಡುಕುತ್ತಿರುತ್ತಾನೆ. ಆದ್ದರಿಂದಲೇ ನಮ್ಮ ಕಾದಂಬರಿಗಳಿಗೆ ಅರಮನೆಯಲ್ಲಿ ಆಸಕ್ತಿ ಇಲ್ಲ, ರಾಜರಾಣಿಯರಂತು ಬೇಕೇ ಇಲ್ಲ. ತಮಾಷೆಯೆಂದರೆ ಮೊಖಾಶಿಯವರ ಕಾದಂಬರಿಯಲ್ಲು ನಿಜವಾಗಿಯು ಚೆನ್ನಾಗಿ ಚಿತ್ರಣವಾಗಿರುವುದು ಸಾಮಾನ್ಯ ಮನುಷ್ಯರ ಸ್ವಭಾವ ಮತ್ತು ವೈಚಿತ್ರ್ಯಗಳೆ.

ಆದರೆ ಆ ಸಮರ್ಥ ಚಿತ್ರಣದ ಮಾತು ಏನೇ ಇದ್ದರು ಸಾಮಾನ್ಯನ ಅಸಾಮಾನ್ಯತೆಯಲ್ಲಿ ನಮ್ಮ ಕಾದಂಬರಿಗಳಿಗಿರುವ ಗಾಢವಾದ ನಂಬಿಕೆಯನ್ನು ಮೊಕಾಶಿಯವರ ಕಾದಂಬರಿ ದೃಢಪಡಿಸುವುದಿಲ್ಲ. ಸಾಮಾನ್ಯ ಮನುಷ್ಯ ರಾಜ ಕೀಯವಾಗಿ ಸಾಮಾಜಿಕವಾಗಿ 'ಮುಖ್ಯ'ವಾಗಿ ಕಾಣುವುದಕ್ಕಿಂತಲು ಮುಂಚೆಯೆ ನಮ್ಮ ಕಾದಂಬರಿಗಳು ಅವನಲ್ಲಿ ವಿಶೇಷವಾದ ಚೈತನ್ಯವನ್ನು, ಪ್ರಭೆಯನ್ನು ಗಮನಿಸಿದ್ದವು. ಈ ಕಾದಂಬರಿಯಲ್ಲಿ ಸಾಮಾನ್ಯ ಮನುಷ್ಯನ ಬಗ್ಗೆ ಅಂತಹ ಶ್ರದ್ಧೆ, ಒಲವು ಕಂಡುಬರುವುದಿಲ್ಲ. ಅವರು ಹೆಚ್ಚೆಂದರೆ ಕೇವಲ ಒಂದು ರಾಜ್ಯದ ಪ್ರಜೆಗಳು. ಆಕಸ್ಮಿಕವಾಗಿ ಮನುಷ್ಯರು. ಗುತ್ತಿ ಆಕಸ್ಮಿಕವಾಗಿ ಹಳೆ ಪೈಕದವ ಅದಕ್ಕಿಂತಲು ಹೆಚ್ಚಾಗಿ ಮನುಷ್ಯ.

ಇದಕ್ಕೆ ತಳುಕು ಹಾಕಿಕೊಂಡ ಇನ್ನೊಂದು ಸಂಗತಿ ಇದೆ. ನಮ್ಮ ಕಾದಂಬರಿ ಪರಂಪರೆಗೆ ಗಹನತೆ ಅಥವಾ ವಿಚಾರಗಳ ಗುಂಗಿಲ್ಲ. ಅದರ ಗುಂಗಿರುವುದು ಬದುಕಿನ ಗತಿಯ ಬಗ್ಗೆ. ಅದಕ್ಕೆ ಅರಮನೆ ಬೇಕಿಲ್ಲ. ರಂಗಮ್ಮನ ವಠಾರ ಸಾಕು, ಸಾಕವ್ವನ ಹಟ್ಟಿಯೇ ಸಾಕು. ಗಹನತೆಗಿಂತಲು ಬದುಕಿನ ಗತಿಯ ಬಗ್ಗೆಯೆ ಇದರ ಗುಂಗಿರು ವುದರಿಂದ. ಒಂದು ಅರಮನೆಯ ಕತೆ, ಒಂದು ರಾಜ್ಯದ ಸ್ಥಿಮಿತತೆ ನಮಗೆ ಮುಖ್ಯವಲ್ಲ. ರಾಜರ ರಣಭೇರಿಗಿಂತಲು ಇಲ್ಲಿ ಮುಖ್ಯವಾದ್ದು ಸಾಕವ್ವನ ಗುಣ ಗಾಟ, ಪುರುಕುತ್ಸಾನಿಯ ಯುದ್ಧತಂತ್ರಕ್ಕಿಂತ ಮುಖ್ಯವಾದ್ದು—ಮಾಲೇರ ಪುಟ್ಟನ ತಮಾಷೆ ತುಂಬಿದ ಉಪಾಯಗಳು.

ಗಹನತೆಯ ಗುಂಗಿಲ್ಲದೆ ಇರಬಹುದು, ಆದರೆ ಆದರ್ಶದ ವಾಂಛೆ ಮಾತ್ರ ಇದೆ. ಇದು ವೈಚಾರಿಕತೆಯಿಂದ ಮೂಡಿಬಂದ ಚರ್ಮದ ಮೇಲಿನ ಆದರ್ಶವಲ್ಲ. ಹೃದಯದೊಳಗೆ ಅಂತರ್ಗತವಾಗಿರುವಂತದ್ದು. ವೈಚಾರಿಕವಾದ ವಿಶ್ಲೇಷಣೆಗೆ ಗುರಿಪಡಿಸಿದರೆ ಗುತ್ತಿ, ವೆಂಕಟಿಗನಂತವರು ಆದರ್ಶಪ್ರಾಯರಾಗಿ ಕಾಣುವುದಿಲ್ಲ. ನಮ್ಮ ಪರಂಪರೆಯ ಆದರ್ಶದ ಕಲ್ಪನೆಯೆ ಬೇರೆ. ಮನುಷ್ಯನ ಎತ್ತರದ ಬಗ್ಗೆ ಸಾಧ್ಯತೆಗಳ ಬಗ್ಗೆ ಚೈತನ್ಯದ ಬಗ್ಗೆ ಯಾವತ್ತು ಯಾವ ಕಾರಣಕ್ಕು ರಾಜಿ ಮಾಡಿಕೊಳ್ಳದ ಆದರ್ಶದ ವಾಂಛೆ ಇದು. ಇಲ್ಲಿ ಆದರ್ಶ ಒಂದು ವಿಚಾರವಲ್ಲ, ನಂಬಿಕೆಯಾಗಿ ಮಾರ್ಪಟ್ಟ ಸ್ಥಿತಿ ಇದೆ. ಇಂತಹ ಒಂದು ಮಹತ್ವಪೂರ್ಣವಾದ ಆದರ್ಶದ ವಾಂಛೆಯ ಕೊರತೆಯನ್ನು ನಾವಿಲ್ಲಿ ಕಾಣುತ್ತೇವೆ. ಕೊನೆಯಪಕ್ಷ ಈಗ ಚಾಲ್ತಿಯಲ್ಲಿರುವ ಹಾಗೆ, ವಿಚಾರವಾದದಿಂದ ಮೂಡಿ ಬಂದ 'ಆದರ್ಶ'ಗಳ ಕಲ್ಪನೆಯ ಆಸರೆಯು ಈ ಕಾದಂಬರಿಗಿಲ್ಲ.

* * * *

ಕೊನೆಯದಾಗಿ ಒಂದು ಮಾತು. ಈ ಕಾದಂಬರಿಯನ್ನು ವಿಶ್ಲೇಷಿಸಲು ನಾನು ಹೆಚ್ಚಾಗಿ ನಮ್ಮ ಕಾದಂಬರಿಗಳ ಓದಿನಿಂದ ಬಂದಿರುವ ತಿಳುವಳಿಕೆಯನ್ನೆ ಒಂದು ಮುಖ್ಯವಾದ ಮಾನದಂಡವನ್ನಾಗಿ ಉಪಯೋಗಿಸಿಕೊಂಡಿದ್ದೇನೆ. ಅವಧೇಶ್ವರಿಯ ಕೊರತೆ ಏನೇ ಇರಲಿ ಅದರ ಓದು-ಮರುಓದು ನಮ್ಮ ಕಾದಂಬರಿ ಪರಂಪರೆಯ ಮಹತ್ವವನ್ನು ಶಕ್ತಿಯನ್ನು ಸರಿಯಾಗಿ ತಿಳಿದುಕೊಳ್ಳಲು ನನಗೆ ಅದು ನೆರವಾಗಿದೆ. ಸಾಹಿತ್ಯ ಕೃತಿಯ ಓದಿನಿಂದ ಇಂತಹ ಪ್ರಚೋದನೆಗಿಂತ ಮತ್ತೇನನ್ನು ಬಯಸಬೇಕು? ಮೊಕಾಶಿ ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ತಾವು ಕನ್ನಡ ಸಾರಸ್ವತ ಲೋಕದ ಪರಂಪರೆಗೆ ಸೇರಿದವರು, ಈ ಕಾದಂಬರಿ ಕೂಡ ಆ ಜಾಡಿನದು ಎಂಬಂತಹ ಮಾತುಗಳನ್ನಾಡುತ್ತಾರೆ. ಆ ಮಾತಿನ ಬಗ್ಗೆ ಈ ಕೃತಿಯ ಹಿನ್ನೆಲೆಯಲ್ಲಿ ಪ್ರಶ್ನೆಗಳು ಭಿನ್ನಾಭಿಪ್ರಾಯಗಳು ಇರಬಹುದಾದರು, ಈ ಕಾದಂಬರಿಯ ಓದಿನಿಂದ ನಮ್ಮ ಕಾದಂಬರಿ ಪರಂಪರೆಯ ಆಳ-ಅಗಲಗಳ ಸಮರ್ಥ ಅರಿವೊಂದು ಮೂಡಿಬರುತ್ತದೆ ಎಂಬುದರ ಬಗ್ಗೆ ಮಾತ್ರ ಯಾವ ಭಿನ್ನಾಭಿಪ್ರಾಯವು ಇರಲಾರದು.

# ಪುಣೇಕರರೇ, ನವ್ಯ ಸಾಹಿತ್ಯದ ಬಗ್ಗೆ ನಿಮ್ಮ ನಿಲುವನ್ನು ಮರುಪರಿಶೀಲಿಸಿ!

---

ಟಿ. ಜಿ. ರಾಘವ

ಮೊಕಾಶಿಯವರ ಇರುವಿನ ಬಗ್ಗೆ ನನಗೆ ಮೊದಲು ಅರಿವಾದದ್ದು ಸುಮಾರು ೨೫-೩೦ ವರ್ಷಗಳ ಹಿಂದೆ ಮೈಸೂರಿನಲ್ಲಿ. ಗೋಪಾಲಕೃಷ್ಣ ಅಡಿಗರು ಆಗತಾನೆ ಮುಂಬೈಗೆ ಹೋಗಿ ಬಂದಿದ್ದರು. ಆ ಬಗ್ಗೆ ದಿನನಿತ್ಯ ಸಂಜೆ ಸೇರುತ್ತಿದ್ದ ಲೇಖಕರ ಗುಂಪಿನಲ್ಲಿ ಮಾತನಾಡುತ್ತ ಅಡಿಗರು, ಮೊಕಾಶಿಯವರೊಂದಿಗೆ ರಾತ್ರಿಯೆಲ್ಲ ಕಾವ್ಯದ ಬಗ್ಗೆ ಚರ್ಚೆ ನಡೆಸಿದ್ದನ್ನು ಸ್ಮರಿಸಿ ಒಂದು ಘಟನೆಯನ್ನು ಹೇಳಿದರು. ರಾತ್ರಿ ಸುಮಾರು ಹೊತ್ತಾಗಿದೆ. ಒಂದೇ ಸಮನೆ ಸಾಗುತ್ತಿದ್ದ ಸಾಹಿತ್ಯ ಚರ್ಚೆಯ ನಡುವೆ ಮೊಕಾಶಿಯವರು ಅಲ್ಲಿಯೇ ಇದ್ದ ಟೇಬಲಿನ ಮೇಲೆ ತಟ್ಟನೆ ಹಾರಿ ನಿಂತರು. "For me, Mr. Adiga, this is great Poetry" ಎಂದವರೇ "ಜೈ ಜೈ ವಿಠಲ ಪಾಂಡುರಂಗ" ಹಾಡುತ್ತ ಕೈಯಲ್ಲಿ ಚಿಟಕಿ ಹಾಕುತ್ತ ಟೇಬಲಿನ ಮೇಲೆ ಕುಣಿಯತೊಡಗಿದರು. ಅಡಿಗರ ಈ ವಿವರಣೆ ಕೇಳುತ್ತಿದ್ದಂತೆ ಆ ಗುಂಪಿನಲ್ಲೇ ಅತಿ ಚಿಕ್ಕವನಾಗಿದ್ದ ನಾನು ವಿಚಿತ್ರ ಆಕರ್ಷಣೆಯಲ್ಲಿ ಮೊಕಾಶಿಯವರ ಬಗ್ಗೆ ವಿವರ ಕೇಳಿದೆ. ಅಡಿಗರು ಅವರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಓದಿಲ್ಲವೆ ಎಂದರು. ಓದಲಿಕ್ಕೆ ಹೇಳಿದರು.

ಮತ್ತೊಂದು ಘಟನೆ ಇತ್ತೀಚಿನದು. ನನ್ನ ಸಣ್ಣ ಕತೆಗಳ ಸಂಗ್ರಹ ಒಂದನ್ನು ಮೊಕಾಶಿಯವರಿಗೆ ಕಳುಹಿಸಿಕೊಟ್ಟಿದ್ದೆ. ಬೆಂಗಳೂರಿನಲ್ಲಿ ವಿಶ್ವವಿದ್ಯಾಲಯದ ವಿಚಾರ ಸಂಕಿರಣ ಒಂದರಲ್ಲಿ ಮೊಕಾಶಿಯವರು ಸಿಕ್ಕರು. 'ನಿಮ್ಮ ಕತೆಗಳನ್ನು ಓದಿದೆ' ಎಂದರು. ಅವರ ಮುಖ ನೋಡಿದೆ, ಅವರ ಅಭಿಪ್ರಾಯಕ್ಕಾಗಿ, ತುಂಬ ಅರ್ಥಗರ್ಭಿತವಾದ ಮಾತು ಹೇಳುವವರಂತೆ ನನ್ನತ್ತ ನೋಡುತ್ತ 'ಲಾರೆನ್ಸ್?' ಎಂದು ಕೇಳಿದರು. ಮುಗುಳು ನಕ್ಕರು. ನಾನೂ ತುಂಟತನದಲ್ಲಿ ಅವರಿಗೆ ಖುಷಿಯಾಗ

ಲೆಂದು 'ಹೌದು' ಎಂದೆ. ಆಗ ಅವರ ಮುಖದಲ್ಲಿ ಕಾಣಿಸಿಕೊಂಡ ಆ ತಬ್ಬುಗಾರನ ಸಂತಸ, ತೃಪ್ತ್ಯೋಸ್ಮಿಭಾವ, ಇವತ್ತಿಗೂ ನನ್ನ ಕಣ್ಣಿಗೆ ಕಟ್ಟಿದೆ. ಗೆಳೆಯರ ಬಳಿ ಈ ವಿಷಯ ಹೇಳಿ ನಾನೂ ಖುಷಿಯಿಂದ ನಕ್ಕೆ, ಏಕೆಂದರೆ ಅದುವರೆವಿಗೂ ಬೇರೆಯವರು ನನಗೆ ಕಾಫ್ಕಾ ಎಂದಿದ್ದರು, ಕಮೂ ಎಂದಿದ್ದರು, ಆದರೆ ಲಾರೆನ್ಸ್ ಹೇಳಿರಲಿಲ್ಲ. ನನ್ನ ನವ್ಯ ಕತೆಗಳಿಗೆ ಮೊಕಾಶಿಯವರು ಮತ್ತೊಂದು ಪುಕ್ಕ ಸೇರಿಸಿದ್ದರು. ಅಲ್ಲದೆ ಕೆಲವು ನವ್ಯರಂತೆ ಮೊಕಾಶಿಯವರೂ ಲೇಬಲ್ ಹಚ್ಚಿದ್ದರು!

ಇದೇ ಸಂದರ್ಭದಲ್ಲಿ ಮತ್ತೂ ಒಂದು ಘಟನೆಯನ್ನು ಹೇಳುತ್ತೇನೆ. ಏಕೆಂದರೆ ಈ ಘಟನೆಗಳಿಗೂ ನಾನು ಮುಂದೆ ಮೊಕಾಶಿಯವರ ಬಗ್ಗೆ ಹೇಳುವ ಮಾತುಗಳಿಗೂ ಸಂಬಂಧವಿದೆ.

ಕತೆಗಾರ ಕೆ. ಸದಾಶಿವ ಮತ್ತು ನಾನು ಇಬ್ಬರೂ ವಿಜ್ಞಾನದ ಅಧ್ಯಾಪಕರಾಗಿದ್ದೆವು. ನಾನು ಹೈಸ್ಕೂಲ್ ಅಧ್ಯಾಪಕ, ಸದಾಶಿವ ಕಾಲೇಜಿನಲ್ಲಿ ಡೆಮಾನ್ಸ್ಟ್ರೇಟರ್. ಇಂಗ್ಲಿಷ್ ಅಧ್ಯಾಪಕರಾಗಿಲ್ಲವಲ್ಲ ಎಂಬ ಕೊರಗು ನಮ್ಮಿಬ್ಬರಿಗೂ. ನವ್ಯದ ಪ್ರವಾಹದಲ್ಲಿ ನಾವು ಲೇಖಕ–ವಿಮರ್ಶಕರಾಗಿರಬೇಕಾದರೆ, ಮುಂಚೂಣಿಯಲ್ಲಿರಬೇಕಾದರೆ, ಲೀವಿಸ್–ಎಲಿಯಟ್ ಬಗ್ಗೆ ಅಧಿಕಾರಯುತವಾಗಿ ಮಾತನಾಡಬೇಕಾದರೆ ಇಂಗ್ಲಿಷ್ ಅಧ್ಯಾಪಕರಾಗಲೇಬೇಕೆಂಬ ನಂಬಿಕೆ ನಮ್ಮಲ್ಲಿ. ಅದಕ್ಕಾಗಿ ಇಂಗ್ಲಿಷ್ ಎಂ.ಎ., ಮಾಡಬೇಕೆಂಬ ಹಂಬಲ. ಆದರೆ ಸದಾಶಿವನಿಗೆ ದುಃಖ, ಇಂಗ್ಲಿಷಿನಲ್ಲಿ ಹೆಚ್ಚಿನ ಅಂಕ ಬಂದಿಲ್ಲವೆಂದು. ನನಗೋ ಖುಷಿ.

ಈ ತೀರ ವೈಯುಕ್ತಿಕವಾದ ಘಟನೆಯ ಹಿನ್ನೆಲೆ ಈಗಾಗಲೆ ನಿಮಗೆ ಅರ್ಥವಾಗಿರಬೇಕು. ಈ ಘಟನೆಯನ್ನು ನಾನು ಬಣ್ಣಿಸುತ್ತಿರುವಂತೆಯೇ ಮೊಕಾಶಿಯವರನ್ನು ಅತಿ ಸೂಕ್ಷ್ಮವಾಗಿ ಶ್ಲಾಘಿಸುತ್ತಿದ್ದೇನೆ! ಅಂದರೆ ನನ್ನ ಮತ್ತು ಸದಾಶಿವನ ಆಗಿನ ಮನೋಧರ್ಮದ ಸೂಕ್ಷ್ಮಗ್ರಹಿಕೆ ಮೊಕಾಶಿಯವರ ನವ್ಯ ಸಾಹಿತ್ಯದ ಬಗೆಗಿನ ಕೆಲವು ಚಿಂತನೆಗಳ ಹಿನ್ನೆಲೆಯಲ್ಲಿದೆ.

ಅಲ್ಲದೆ, ಮೊಕಾಶಿಯವರೂ ನಾನೂ ಒಂದೇ ಗುರು ಶಿಷ್ಯ ಪರಂಪರೆಗೆ ಸೇರಿದವರು. ಸುಮಾರು ಇಪ್ಪತ್ತು ವರ್ಷಗಳ ಅಂತರದಲ್ಲಿ ಇಬ್ಬರೂ ಪ್ರೊ|| ಮೆನೆಜಿಸ್ರವರ ಶಿಷ್ಯರಾಗಿದ್ದೆವು. ನಾನು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಓದಿದರೂ ಡಾ|| ಶಂಕರ ಮೊಕಾಶಿಯವರು ನನ್ನ ವಿದ್ಯಾಗುರುಗಳಾಗುವುದನ್ನು ಸ್ವಲ್ಪದರಲ್ಲಿ, ಅಂದರೆ ಒಂದು ವರ್ಷದ ಅಂತರದಲ್ಲಿ, ವಿಧಿಲಿಖಿತ ಎಂದು ಹೇಳಲೆ, ತಪ್ಪಿಸಿಕೊಂಡೆ! ಈ ತಪ್ಪಿಸಿಕೊಂಡೆ ಹೇಳಿಕೆಗೆ ಮೊಕಾಶಿಯವರು ಅವರ ಕವನ ಸಂಕಲನದಲ್ಲಿ ಪ್ರಸ್ತಾಪಿಸಿರುವಂತೆ ಇರುವುದು ಒಂದೇ ಅರ್ಥ! ಆ ಅರ್ಥದ ಬಗ್ಗೆ ಭಿನ್ನಾಭಿಪ್ರಾಯ ಬಂದರೆ, ಹೇಳಿಕೆ ಕೊಟ್ಟ ನನ್ನ ನಿರ್ಣಯವೇ ಕೊನೆಯದು! ಈ ಮಾತಿನಲ್ಲಿ ವ್ಯಂಗ್ಯವಿಲ್ಲ, ಕೀಟಲೆಯಿದೆ. ಇಂತಹ ಕೀಟಲೆಯ ದನಿಗಳು ಕನ್ನಡ ಸಾಹಿತ್ಯದಲ್ಲಿ ಮೊಕಾಶಿಯವರ ಆಸ್ತಿ. ಅವರ ಕನ್ನಡ ಬರವಣಿಗೆ, ಭಾಷಣಗಳಲ್ಲಿ ಈ ಕೀಟಲೆ

ತುಂಬಿ ಹರಿದಿದೆ. ಆದರೆ ಅವರ ಇಂಗ್ಲಿಷ್ ಲೇಖನಗಳಲ್ಲಿ, ಪುಸ್ತಕಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಕಾರಣ, ಇಂಗ್ಲಿಷಿನಲ್ಲಿ ಮೊಕಾಶಿಯವರು ತುಂಬ ಸೀರಿಯಸ್ಸಾಗಿ ಬರೆಯುತ್ತಾರೆ. ಸೊಗಸಾಗಿಯೂ ಬರೆಯುತ್ತಾರೆ.

ಮೊಕಾಶಿಯವರು ಉಭಯ ಭಾಷಾ ಲೇಖಕರು. ಕನ್ನಡಕ್ಕಿಂತ ಇಂಗ್ಲಿಷಿನಲ್ಲಿ ಹೆಚ್ಚಾಗಿ ಬರೆದಿದ್ದಾರೆ. ಇಂಗ್ಲಿಷಿನಲ್ಲಿ ಬರೆಯಲು ಅವರು ಕೊಡುವ ಕಾರಣ "The right kind of Indian poet should compose in English too; otherwise, the ground is left open for the romp of the rootless ; and disinherited slavishness".

ಕನ್ನಡಕ್ಕಿಂತ ಇಂಗ್ಲಿಷಿನಲ್ಲೇ ಹೆಚ್ಚು ಕೃಷಿ ಮಾಡಿರುವ ಈ ಲೇಖಕರಿಗೆ ಯೇಟ್ಸ್ ತುಂಬ ಮೆಚ್ಚಿನ ಕವಿ. ಅವನ ಕವಿತೆಗಳ ಎರಡು ವಿಮರ್ಶಾ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಒಂದಾದ The later phase in the development of W. B. Yeats ಕೃತಿಯ ಬಗ್ಗೆ ಬರೆಯುತ್ತ ಇಂಗ್ಲಿಷ್ ಕವಿ ವಿಮರ್ಶಕ ಹರ್ಬರ್ಟ್ ರೀಡ್ "To be quite honest, I did not expect a book of such scope and profoundity, not believing it possible that any one not born to the Language of a poet could reach to such depths of understanding and sensitive appreciation" ಎನ್ನುತ್ತಾನೆ. ಅಲ್ಲದೆ I am amazed, I admire ಮುಂತಾದ ವಿಶೇಷಣಗಳನ್ನು ಉಪಯೋಗಿಸುತ್ತಾನೆ. ತಾನು ಉಪಯೋಗಿಸುತ್ತಿರುವ ವಿಶೇಷಣಗಳ ಬಗ್ಗೆ ನಾಚಿ ಮೊಕಾಶಿಯವರ ವಿಮರ್ಶೆಯ ವಿರುದ್ಧ ದನಿಯೆತ್ತಲು ಪ್ರಯತ್ನಿಸಿದರೂ ತಪ್ಪು ಹುಡುಕುವುದು ಕಷ್ಟ ಎನ್ನುತ್ತಾನೆ. ಮೊಕಾಶಿಯವರ ವಿಮರ್ಶಾ ಪ್ರತಿಭೆಗೆ ಈ ಹೊಗಳಿಕೆ ತುಂಬ ಹೆಚ್ಚಲ್ಲ.

ಯೇಟ್ಸ್‌ನ ಮೇಲಿನ ಇವರ ಎರಡು ಕೃತಿಗಳೂ ಸೊಗಸಾದ ಕೃತಿಗಳು. ಆಂಗ್ಲೋ ಅಮೆರಿಕನ್ ವಿಮರ್ಶಾ ತತ್ವಗಳಿಗಿಂತ ಭಿನ್ನವಾದ ಮಾರ್ಗವನ್ನು ಹಿಡಿದು ಯೇಟ್ಸ್‌ನ ಕೊನೆಯ ಪದ್ಯಗಳಲ್ಲಿನ ಕ್ಲಿಷ್ಟತೆಯನ್ನು ಬಗೆಹರಿಸುವ ಕೃತಿಗಳು. ಮೊಕಾಶಿಯವರ ಆಶಯ ಕೂಡ ಭಾರತೀಯರು ತಮ್ಮದೇ ಆದ ವಿಮರ್ಶಾ ಧರ್ಮವನ್ನು ಬೆಳೆಸಿಕೊಳ್ಳಬೇಕು. ಆಂಗ್ಲೊ-ಅಮೆರಿಕಾದ ಸ್ವಾರ್ ವಿಮರ್ಶಾ ತತ್ವಗಳನ್ನು ಪಾರಿಭಾಷಿಕ ಶಬ್ದಗಳನ್ನು ಹಾಗೆಯೇ ತೆಗೆದುಕೊಂಡು ಗಿಣಿಪಾಠ ಮಾಡುವ ಬದಲು ಹಿಂಜರಿಕೆಯಿಲ್ಲದೆ ಇಂಗ್ಲಿಷ್ ಕಾವ್ಯಕ್ಕೆ ಭಾರತೀಯ ಪ್ರತಿಕ್ರಿಯೆಯನ್ನು ತೋರಿಸಬೇಕು. ಬ್ರಿಟಿಷ್ ವಿಮರ್ಶೆಗೆ ಯೇಟ್ಸ್, ವಿಲ್ಸನ್, ಬ್ಲೇಕ್ ಮುಂತಾದ ದೈತ್ಯ ಲೇಖಕರನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬಲ್ಲ ಸಾದನೆಗಳನ್ನು ಒದಗಿಸಲು ಸಾಧ್ಯವಿಲ್ಲ. I resented new criticism because it had wasted my time" ಎನ್ನುತ್ತಾರೆ. ಆಂಗ್ಲೊ-ಅಮೆರಿಕನ್ ವಿಮರ್ಶೆಯಲ್ಲಿ ಜೀವನ ನಿಷ್ಠೆಗಿಂತ ಸಾಹಿತ್ಯ ನಿಷ್ಠೆ ಹೆಚ್ಚು. ಯೇಟ್ಸ್‌ನ ಕಾವ್ಯ ಅರ್ಥಮಾಡಿ

ಕೊಳ್ಳಲು ಅವನ ಜೀವನ, ಅವನ ಹುಚ್ಚಾಟಗಳು, ಅವನ ಚರಿತ್ರೆಯ ಕನಸುಗಳು ಮುಂತಾದುವೆಲ್ಲ ಸಹಾಯಕ. ಆದುದರಿಂದ ಎಲಿಯೆಟ್-ಲೀವಿಸ್ ರೀತಿಯದ ಲ್ಲದ, ಸಂಪೂರ್ಣ ಬೇರೆಯದೇ ಆದ ವಿಮರ್ಶಾ ತತ್ವಗಳನ್ನು ಉಪಯೋಗಿಸಬೇಕಾಗ ತ್ತದೆ ಎನ್ನುವ ಹಿನ್ನೆಲೆಯಲ್ಲಿ ಯೇಟ್ಸ್‌ನ ಕಾವ್ಯ ವಿಮರ್ಶೆ ಮಾಡುತ್ತಾರೆ. ಮೊಕಾಶಿ ಯವರ ಪ್ರಕಾರ ಈ ಎಲಿಯೆಟ್-ಲೀವಿಸ್ ಮಾದರಿ ವಿಮರ್ಶೆ, ಬೇಂದ್ರೆಯಂತಹ ದೈತ್ಯಕವಿಯನ್ನು ಕೂಡ ಅರ್ಥಮಾಡಿಕೊಳ್ಳಬಲ್ಲ ಸಾಧನೆಗಳನ್ನು ಒದಗಿಸುವುದಿಲ್ಲ.

ಯೇಟ್ಸ್‌ನ ಮೇಲಿನ ಇವರ ವಿಮರ್ಶೆಯನ್ನು ಓದುತ್ತ ಹೋದಂತೆ ಪ್ರಥಮ ದರ್ಜೆಯ ಪ್ರಚಂಡ ಬುದ್ಧಿಶಕ್ತಿ ಈ ಕೃತಿಗಳ ವಿಶ್ಲೇಷಣೆಯಲ್ಲಿ ತೊಡಗಿದೆ ಎನಿಸು ತ್ತದೆ. ಆದರೆ ಈ ಪ್ರಚಂಡ ಬುದ್ಧಿಶಕ್ತಿ ಅವರ ಸೃಜನಾತ್ಮಕ ಕೃತಿಗಳಲ್ಲಿ ಪೂರ್ಣ ಅಭಿವ್ಯಕ್ತಿ ಪಡೆಯಲಾರದೆ ಹೋಗಿರುವುದು ಒಂದು ದುರಂತ.

ಮೊಕಾಶಿಯವರಿಗೆ ಯೇಟ್ಸ್ ಅಷ್ಟು ಹತ್ತಿರದ ಕವಿಯಾಗಲು ಕಾರಣ ಆತ ತನ್ನ ಮೂಲವನ್ನು ಇಂಗ್ಲಿಷ್ ಪರಂಪರೆಯಲ್ಲಿ ಅಲ್ಲ, ಸ್ವಂತ ಐರಿಷ್ ಪರಂಪರೆಯಲ್ಲಿ ಪುರಾಣ, ಸಂಸ್ಕೃತಿಗಳ ನೆಲೆಯಲ್ಲಿ ಹುಡುಕಿದ, ಉಳಿದ ಐರಿಷ್ ಲೇಖಕರಿಗೂ ಹುಡುಕುವಂತೆ ಮಾಡಿದ. ಹೀಗಾಗಿ ಆತ ಅತ್ಯುತ್ತಮ ಕವಿಯಾದ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಭಾರತೀಯ ನವ್ಯ ಲೇಖಕರ ಸೃಜನಾತ್ಮಕ ಮತ್ತು ವಿಮರ್ಶಾ ಮೂಲ ಪಾಶ್ಚಿಮಾತ್ಯ ಪುರಾಣ, ಪರಂಪರೆ, ಸಂಸ್ಕೃತಿಗಳ ನೆಲೆಯಲ್ಲಿದೆ. ಭಾರತೀಯರು ಯೇಟ್ಸ್‌ನಿಂದ ಕಲಿಯಬೇಕಾಗಿದ್ದುದನ್ನು ಕಲಿಯಲಿಲ್ಲ ಎಂದು ಮೊಕಾಶಿ ವಿಷಾದಿಸುತ್ತಾರೆ. ಎರಡು ಭಾಷೆಗಳಲ್ಲಿ ಬರೆಯುವ ಒಬ್ಬ ಭಾರತೀಯ ಕವಿ ಎದುರಿಸಬೇಕಾದ ನೈಜಸಮಸ್ಯೆಗಳ ಬಗ್ಗೆ ಮುಖ್ಯವಾಗಿ ಭಾವನೆ ಮತ್ತು ನಡವಳಿಕೆಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಮಾದರಿಗಳಿಗೆ ಸಂಬಂಧಪಟ್ಟ ಸಮಸ್ಯೆ ಗಳನ್ನು ಬಗೆಹರಿಸಿಕೊಳ್ಳಬೇಕಾದ ಆವಶ್ಯಕತೆಯ ಬಗ್ಗೆ, ವಹಿಸಬೇಕಾದ ಎಚ್ಚರದ ಬಗ್ಗೆ ದೀರ್ಘವಾಗಿ ಉನ್ನತ ಮಟ್ಟದಲ್ಲಿ ಮೊಕಾಶಿ ವಿಚಾರಮಾಡುತ್ತಾರೆ. ಯೇಟ್ಸ್ ಹೇಗೆ ಐರಿಷ್ ಜಾನಪದದ ಉತ್ಸಾಹ, ಸೊಬಗು, ಅಲ್ಯೂಷನ್ಸ್‌ಗಳನ್ನು ಇಂಗ್ಲಿಷ್ ಭಾಷೆಗೆ ಹೇರಿದನೊ ಅದೇ ರೀತಿ ಭಾರತೀಯ ಕವಿಯೂ ಮಾಡಬೇಕು. ಅಲ್ಲದೆ ಭಾರತೀಯ ಲೇಖಕ ಪಾಶ್ಚಿಮಾತ್ಯ ಪ್ರಭಾವಕ್ಕೆ ತನ್ನನ್ನು ಒಡ್ಡಿಕೊಂಡಾಗ ಅವನ ಮನೋನಿರ್ಧಾರಗಳು, ಅನುಭವಗಳು ಭಾರತೀಯವಾದ ಅನುಭವದ ಮೂಲದಲ್ಲಿರ ಬೇಕು. ಯಾರೇ ಆದರೂ ಸುಲಭವಾಗಿ ಸಮರ್ಥ (effecient) ಕವನಗಳನ್ನು ಇಂಗ್ಲಿಷಿನಲ್ಲಿ ರಚಿಸಿಬಿಡಬಹುದು. ಆದರೆ ಕಾವ್ಯವನ್ನು ಈ ಸಮಸ್ಯೆಗಳ ಮುಖಾ ಮುಖಿಯಲ್ಲಿ ಬರೆಯಬೇಕು ಎನ್ನುತ್ತಾರೆ. ಆದರೆ, ಇಷ್ಟೆಲ್ಲ ಅರಿವಿದ್ದರೂ, ತಮ್ಮ ಪುಸ್ತಕಗಳಲ್ಲಿ ಎತ್ತುವ ಯಾವತ್ತೂ ಪ್ರಶ್ನೆಗಳನ್ನು ಮೊಕಾಶಿಯವರು ತಮ್ಮ ಕಾವ್ಯ ದಲ್ಲಿ ಎದುರಿಸುವುದಿಲ್ಲ.

ಮೊಕಾಶಿಯವರ ಇಂಗ್ಲಿಷ್ ಕವನಗಳಲ್ಲಿ ಭಾರತೀಯ ಪದ ಪ್ರಯೋಗ

ಬಿಟ್ಟರೆ ಭಾರತೀಯ ನೆಲೆಯಲ್ಲಿ, ನಮ್ಮ ಪುರಾಣ, ಪರಂಪರೆ, ಸಂಸ್ಕೃತಿಗಳ ನೆಲೆಯಲ್ಲಿ ಯಾವ ರೀತಿಯ ಹುಡುಕಾಟವೂ ಕಾಣಬರುವುದಿಲ್ಲ. ಅವರ ಇಂಗ್ಲಿಷ್ ಕವನಗಳು ನಮ್ಮ ಸಂಸ್ಕೃತಿಯಲ್ಲಿ ಬೇರಿಲ್ಲದ, ಇಂಗ್ಲಿಷಿನಲ್ಲಿ ಬರೆಯುವ ಉಳಿದ ಭಾರತೀಯ ಕವಿಗಳ ಕವನಗಳಂತೆಯೆ ಇದೆ. ಕಾಂಪಿಟೆಂಟ್ ಎನ್ನಬಹುದಾದ ಕವನಗಳನ್ನಷ್ಟೇ ಮೊಕಾಶಿಯವರು ಇಂಗ್ಲಿಷಿನಲ್ಲಿ ರಚಿಸಿದ್ದಾರೆ. ಆದರೆ ಮೊಕಾಶಿಯವರಲ್ಲಿ ಹಾಸ್ಯಪ್ರಜ್ಞೆ ಸೊಗಸಾಗಿದೆ. ಇದು ವ್ಯಕ್ತಿ ನಿರ್ದೇಶಿತ ವ್ಯಂಗ್ಯ ಅಥವಾ ಕಟಕಿಯಾಗದಿದ್ದಾಗ ತುಂಬ ನವಿರಾಗಿರುತ್ತದೆ. ಈ ಮಾತುಗಳು ಅವರ ಕನ್ನಡ ಕವನಗಳ ಬಗ್ಗೆಯೂ ನಿಜ. ಅನೇಕ ರೀತಿಯ ಪ್ರಯೋಗಗಳ ಮಧ್ಯೆ ಕನ್ನಡದಲ್ಲಿ 'ಮಾಯಿಯ ಮೂರು ಮುಖಗಳು', 'ಗುರುರಾಯ'ದಂತಹ ಉತ್ತಮ ಕವನಗಳನ್ನು ಮೊಕಾಶಿಯವರು ರಚಿಸಿರುವುದನ್ನು ನಾನು ಮರೆತಿಲ್ಲ.

ನಾನು ಮುಖ್ಯವಾಗಿ ಗಮನ ಸೆಳೆಯಬಯಸುವುದು ; ಮೊಕಾಶಿಯವರ ಇಂಗ್ಲಿಷ್ ವಿಮರ್ಶಾ ಕೃತಿಗಳಲ್ಲಿ, ಸೂಕ್ಷ್ಮಾತಿಸೂಕ್ಷ್ಮ ಸ್ತರಗಳನ್ನೂ ಗ್ರಹಿಸಬಲ್ಲ, ಗ್ರಹಿಸಿ ಓದುಗರಿಗೆ ಅರ್ಥವಾಗುವಂತೆ ತಿಳಿಸಬಲ್ಲ ಒಂದು ಜ್ವಲಂತ ಬುದ್ಧಿಶಕ್ತಿ ಕೆಲಸ ಮಾಡುತ್ತದೆ. ಆದರೆ ಆ ಅದ್ಭುತ ಪ್ರತಿಭೆ ಕನ್ನಡ ಬರವಣಿಗೆಯಲ್ಲಿ ಪೂರ್ಣ ತೊಡಗಿಸಿಕೊಳ್ಳದೆ ಮುದುಡಿ ನಿಂತಿದೆ. ಕನ್ನಡ ವಿಮರ್ಶಾ ಕೃತಿಗಳಲ್ಲಿ ಅಲ್ಲಲ್ಲಿ ಮಿಂಚಿದರೂ, ಅವರ ಬುದ್ಧಿ ಮತ್ತೆಯ ನಿಲುವು ನವ್ಯ ಸಾಹಿತ್ಯವನ್ನು ವಿರೋಧಿಸುವ, ಆ ಲೇಖಕರ ಬಗ್ಗೆ ವೈಯಕ್ತಿಕ ಕಟಕಿ, ವ್ಯಂಗ್ಯಗಳನ್ನು ಮತ್ತೆ ಮತ್ತೆ ಉಪಯೋಗಿಸುತ್ತ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತದೆ. ಈ ವ್ಯಂಗ್ಯ, ಕಟಕಿ ಮೊಕಾಶಿಯವರಲ್ಲಿ ಒಂದು ಗೀಳಾಗಿ ಬಿಟ್ಟಿದೆ. ಬಹುಶಃ ನವ್ಯರ ಬಗ್ಗೆ ಮೊಕಾಶಿಯವರು ಹೇಳುವ ಮಾತು ಮೊಕಾಶಿಯವರ ಬಗ್ಗೆಯೂ ನಿಜವಿರಬಹುದು. ವಿಮರ್ಶಾ ತತ್ವಗಳ ಭಾರದಲ್ಲಿ ಅವರ ಸೃಜನಶೀಲತೆ ಮುದುಡಿ ಹೋಗಿರಬಹುದು. ಕನ್ನಡ ಸಾಹಿತ್ಯದಲ್ಲಿ ಮೊಕಾಶಿಯವರು ತೆಗೆದುಕೊಂಡಿರುವ ನಿಲುವಿಗೆ ಯಾವ ಕಾರಣಗಳಿರಬಹುದು? ವೈಯಕ್ತಿಕ ಕಾರಣಗಳೆ ಅಥವಾ ಅವರು ನಂಬಿದ ಕೆಲವು ಮೌಲ್ಯಗಳು ಬುಡಮೇಲಾಗುವಷ್ಟು ನವ್ಯ ಸಾಹಿತ್ಯ ಘಾತವುಂಟುಮಾಡಿತೆ? ಇದಕ್ಕೆ ಉತ್ತರ ಕೇವಲ ವೈಯಕ್ತಿಕ ನೆಲೆಯಲ್ಲಷ್ಟೇ ಇದೆಯೆಂದು ನಾನು ಭಾವಿಸುವುದಿಲ್ಲ, ಮುಖ್ಯವಾಗಿ ಸಾಂಸ್ಕೃತಿಕ ನೆಲೆಯೂ ಇದೆಯೆಂದು ನಾನು ತಿಳಿದಿದ್ದೇನೆ.

ಮೊಕಾಶಿಯವರ ಬಗ್ಗೆ ಬಹಳಷ್ಟು ಜನರಲ್ಲಿ ಒಂದು ಕಲ್ಪನೆಯಿದೆ. ಇಡೀ ನವ್ಯ ಪರಂಪರೆಯನ್ನು ಭಸ್ಮಮಾಡಲು ಹೊರಟ ಭಸ್ಮಾಸುರ ಇವರು ಎಂದು. ಕಾರಣ, ಮೊಕಾಶಿಯವರು ಅವಕಾಶ ಸಿಕ್ಕಕಡೆಯಲ್ಲೆಲ್ಲ, ಅವಕಾಶ ಸಿಗದ ಕಡೆ ಕೂಡ, ಅವಕಾಶ ಮಾಡಿಕೊಂಡು ನವ್ಯ ಸಾಹಿತ್ಯದ ಬಗ್ಗೆ ಲೇವಡಿ, ಕಟಕ, ವ್ಯಂಗ್ಯ ಉಪಯೋಗಿಸಿದ್ದಾರೆ.

ಮೊಕಾಶಿಯವರ ಪ್ರಕಾರ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಉತ್ತಮ

ಸೃಜನಶೀಲ ಮನಸ್ಸು ಬಂಡಾಯದ ದನಿಯನ್ನು ಎಂದೂ ಎತ್ತಿಲ್ಲ. ಕಾರಣ, ಸಮಾಜದಲ್ಲಿ ಆಗಲೇ ಆಗಿದ್ದ ಬದಲಾವಣೆಗಳನ್ನು ಲೇಖಕರು ಭಾಷೆಯಲ್ಲಿ ಅಭಿವ್ಯಕ್ತಿಸಿದರು, ಅಷ್ಟೆ. ಕನ್ನಡದಲ್ಲಿ ಪಾಶ್ಚಾತ್ಯ ಪ್ರಭಾವದಿಂದ ಬಂದ ವ್ಯಕ್ತಿ ಕೇಂದ್ರಿತ ಸಾಹಿತ್ಯವೂ ಕೂಡ ಹಿಂದಿನ ಸಾಹಿತ್ಯದಿಂದ ಸಿಡಿದು ನಿಲ್ಲದೆ ಕ್ರಮೇಣ ಒಂದು ಆಕಾರವನ್ನು ಪಡೆದು ಪರಂಪರೆಯ ಭಾಗವಾಯಿತು. ನವೋದಯ, ನವ್ಯಗಳೆರಡೂ ವ್ಯಕ್ತಿ ಕೇಂದ್ರಿತ. ಬರಿಯ ಬಾಹ್ಯ ಲಕ್ಷಣಗಳಲ್ಲಿ ಮಾತ್ರ ನವ್ಯ ಸಾಹಿತ್ಯ ಬೇರೆಯಾಗಿದ್ದರೂ ೧೯೫೦ರ ವೇಳೆಗೆ ನವ್ಯರು ಸಾಹಿತ್ಯರಂಗದಲ್ಲಿ ಒಂದು ತೋರಿಕೆಯ ಕ್ರಾಂತಿಯನ್ನು ತೀರ ನಾಟಕೀಯವಾಗಿ ನಡೆಸಿದರು. ನವೋದಯ ದವರು ಹಳೆಯದನ್ನು ಅಲ್ಲಗಳೆಯದೆ ಹೊಸದಕ್ಕೆ ದಾರಿ ಮಾಡಿಕೊಟ್ಟರೆ ನವ್ಯರು ಹಳೆಯದನ್ನು ಹಳಿದರು, ಅದರಿಂದ ದೂರ ಸಿಡಿದು ನಿಂತರು. ಇಡೀ ಪರಂಪರೆ ಯನ್ನೇ ಅಲ್ಲಗಳೆದರು.

ಮೊಕಾಶಿಯವರು, ಇಂತಹ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಾಗ ಒಂದು ಚಾರಿತ್ರಿಕ ಸತ್ಯವನ್ನು ಮರೆಯುತ್ತಾರೆ. ನವೋದಯದವರು ಬರೆಯ ಹೊರಟಾಗ ಅವರಿಗೂ ಅವರ ಹಿಂದಿನ ಸಾಹಿತ್ಯಕ್ಕೂ ಭಾರೀ ಅಂತರವಿತ್ತು. ಆ ಪ್ರಾಚೀನ ಲೇಖಕರು ಯಾರೂ ಬದುಕಿರಲಿಲ್ಲ, ಬರೆಯುತ್ತಲೂ ಇರಲಿಲ್ಲ. ಆದುದರಿಂದ ಬಂಡಾಯದ ಪ್ರತಿಕ್ರಿಯೆ ಆಗ ಅನಿವಾರ್ಯವಾಗಿರಲಿಲ್ಲ. ಇದರಿಂದಾಗಿಯೇ ನವೋದಯ ಲೇಖಕರು ಹಿಂದಿನ ಸಾಹಿತ್ಯದ ಬಗ್ಗೆ ಆರಾಧನಾ ಭಾವವನ್ನು ಬೆಳೆಸಿ ಕೊಂಡರು. ಆದರೆ ನವೋದಯದಿಂದ ನವ್ಯಕ್ಕೆ ಸ್ಥಿತ್ಯಂತರವಾಗುವಾಗ ಇದ್ದ ಪರಿಸ್ಥಿತಿಯೇ ಬೇರೆ. ನವೋದಯದ ದೈತ್ಯ ಲೇಖಕರ ಸಂವೇದನೆಯ ಸಾಮೀಪ್ಯ ದಿಂದಾಗಿ ಬಂಡಾಯ ಒಂದು ಚಾರಿತ್ರಿಕ ಅನಿವಾರ್ಯತೆಯಾಯಿತು. ಅವರನ್ನೂ, ಅವರ ಬಗೆಗಿನ ಆರಾಧನಾ ಭಾವವನ್ನೂ ಅಲ್ಲಗಳೆಯಬೇಕಾಯಿತು. ಹೊಸ ಭಾವನೆ ಅಥವಾ ಸಂವೇದನೆಯೊಂದನ್ನು ಹುಟ್ಟುಹಾಕುವಾಗ ಸಾಹಿತ್ಯ ಕ್ಷೇತ್ರ ಒಂದರಲ್ಲೇ ಅಲ್ಲ, ಎಲ್ಲ ಸಾಂಸ್ಕೃತಿಕ, ಸಾಮಾಜಿಕ ಸ್ತರಗಳಲ್ಲೂ ತತ್ಕ್ಷಣದ ಬದಲಾವಣೆಗಾಗಿ ಹೀಗಾಗಿಯೇ ಆಗುತ್ತದೆ. ಇದನ್ನು ಚರಿತ್ರೆ ತಿಳಿಸಿ ಹೇಳುತ್ತದೆ. ಈ ಸೂಕ್ಷ್ಮ ವನ್ನು, ಮೊಕಾಶಿಯವರ ಸೂಕ್ಷ್ಮ ಮನಸ್ಸು ಗ್ರಹಿಸಲಿಲ್ಲವೇಕೆ? ಅಥವಾ ಗ್ರಹಿಸಿದರೂ, ಇದ್ದಕ್ಕಿದ್ದಂತೆ ಬದುಕನ್ನು ನೋಡುವ ರೀತಿ, ಯಥಾಸ್ಥಿತಿ, ಒಪ್ಪಿ ಕೊಂಡಿದ್ದ ಮೌಲ್ಯಗಳು, ಎಲ್ಲ, ಎಲ್ಲ ಸಿಡಿದು ಎಲ್ಲವೂ ಅಸ್ತವ್ಯಸ್ತವಾಗಿ ಇದೊ ಮತ್ತೆ ಹೊಸದಾಗಿ ಪ್ರಾರಂಭಿಸು, ನೀನು ನಡೆದು ಬಂದ ದಾರಿ ಜೊಳ್ಳು, ಎಂದು ಒತ್ತಾಯ ಹೇರಿದ ಆ ಸನ್ನಿವೇಶ ಅಸಹನೀಯವಾಗಿ ಈ ರೀತಿ ಪ್ರತಿಕ್ರಿಯಿಸಿದರೆ?

ಅಸಹನೀಯವಾದರೂ 'ಗಂಗವ್ವ ಗಂಗಾಮಾಯಿ'ಯಂತಹ ಅತ್ಯುತ್ತಮ ವಾದ ಅಂತಃಕರಣ ತುಂಬಿದ ಸಾಂಪ್ರದಾಯಿಕ ಕಾದಂಬರಿಯನ್ನು ಬರೆದು, ತೀರ ಕೆಟ್ಟದಾಗಿದ್ದರೂ 'ಬಂಗಾರದ ಮನುಷ್ಯ'ನಂತಹ ಒಂದು ಸಿನಿಮಾ ಭಾರತೀಯ

ಮೂಲ ಸ್ವರೂಪಕ್ಕೆ ಸಂಬಂಧಪಟ್ಟ ಅವಿಭಕ್ತ ಕುಟುಂಬ, ಶ್ರೇಣೀಕರಣ ಇತ್ಯಾದಿ ಅಂಶಗಳ ಬಗ್ಗೆ ಉಂಟುಮಾಡುವ ಅರಿವನ್ನು ಒಂದು ನವ್ಯ ಕಾದಂಬರಿ ಏಕೆ ಮಾಡುವುದಿಲ್ಲ ಎಂಬ ಪ್ರಶ್ನೆಯತ್ತ ಸಾಂಪ್ರದಾಯಿಕ ಕಾದಂಬರಿಗಳು ಬಂದು ಒಂದು ಪರಂಪರೆ ನಿರ್ಮಾಣವಾಗಲಿ ಎಂದು ಆಶಿಸುತ್ತ, ನವ್ಯಸಾಹಿತ್ಯದ ಪ್ರಭಾವದ ವಿರುದ್ಧ ಸೆಟೆದು ನಿಂತ ಈ ಮನುಷ್ಯ ನಿಜಕ್ಕೂ ಒಂದು ಕೌತುಕ.

ಸ್ವಾತಂತ್ರ್ಯಾನಂತರ ಸಂಪ್ರದಾಯಗಳೆಲ್ಲ, ಎಂ. ಎನ್. ಶ್ರೀನಿವಾಸ್ ಹೇಳುವಂತೆ ಪಶ್ಚಿಮೀಕರಣವಾಗುತ್ತಿದ್ದು, ನಮ್ಮ ಜೀವನದಲ್ಲಿ ಆಗುತ್ತಿದ್ದ ಅಗಾಧ ಬದಲಾವಣೆಯನ್ನು ಅದು ಉಂಟುಮಾಡಿದ ಪರಕೀಯತೆಯನ್ನು ಒಪ್ಪಿಕೊಳ್ಳದೆ, ಅದು ಸಾಹಿತ್ಯದಲ್ಲಿ ಅಭಿವ್ಯಕ್ತಿಯಾಗುತ್ತಿದ್ದಂತೆ, ನವ್ಯ ಲೇಖಕರ ಸ್ಫೂರ್ತಿ ಜೀವನವಲ್ಲ, ಬದುಕಲ್ಲ, ಪಾಶ್ಚಾತ್ಯರ ಪುಸ್ತಕಗಳು, ಅವರದು ಪಾಶ್ಚಾತ್ಯ ಸಂಸ್ಕೃತಿಯ ಸಂವೇದನೆಗಳ ಅಭಿವ್ಯಕ್ತಿ, ಪರಾವಲಂಬಿಗಳು ಎಂದೆಲ್ಲ ಬರೆದ ಮೊಕಾಶಿಯವರು ನಮ್ಮ ನಗರಗಳಲ್ಲಿ ಆಗುತ್ತಿದ್ದ ಅಗಾಧ ಪಾಶ್ಚಿಮಾತ್ಯೀಕರಣವನ್ನು ಮತ್ತದು ನಿಧಾನ ಹಳ್ಳಿಗಳತ್ತ ಧಾಳಿಯಿಡುತ್ತಿದ್ದುದನ್ನು ಏಕೆ ಗುರುತಿಸದೆ ಹೋದರು ಎಂದು ಆಶ್ಚರ್ಯವಾಗುತ್ತದೆ.

ಕಾವ್ಯ ವ್ಯಕ್ತಿತ್ವದ ಅಭಿವ್ಯಕ್ತಿ ಎಂಬಂತಹ absoluteಗಳಿಗೆ, ಸ್ವತಃ ಸಿದ್ಧ ಪ್ರಮಾಣಗಳೆಂದು ತೆಕ್ಕೆಬೀಳುವ ಚಟವನ್ನು ನವ್ಯರು ಬೆಳೆಸಿಕೊಂಡು ಹೇಸಿಗೆ ಬರುವಷ್ಟು ನಾನು, ನಾನು ಎನ್ನುತ್ತ ಸುಳ್ಳು ವ್ಯಕ್ತಿತ್ವವನ್ನು ಕಾವ್ಯಕ್ಕಾಗಿ ನಿರ್ಮಿಸಿಕೊಂಡರು ಎನ್ನುವ ವಾದದ ಮೂಲ ನವೋದಯ ಸಾಹಿತ್ಯದಲ್ಲಿದೆ. ಇದು ನವೋದಯದ ವ್ಯಕ್ತಿ ಕೇಂದ್ರಿತ ಅಭಿವ್ಯಕ್ತಿಯ ವಿಸ್ತರಣೆಯೇ ಹೊರತು ನವ್ಯದ ವಿಶಿಷ್ಟ ಕಾಣಿಕೆಯಲ್ಲ. ಆ ನಿಲುವಿನಲ್ಲಿ ಕೂಡ ಈಗ ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಇದೇ ರೀತಿ ಮೊಕಾಶಿಯವರು ಕೂಡ ತಾವು ತೆಕ್ಕೆ ಬಿದ್ದಿರುವ absoluteಗಳಿಂದ ತಪ್ಪಿಸಿಕೊಂಡು ಬರಲಿ, ನಿಷ್ಕಲ್ಮಷ ಮನಸ್ಸಿನಿಂದ ನವ್ಯ ಸಾಹಿತ್ಯವನ್ನು ಮತ್ತೆ ಅಳೆಯಲಿ ಎಂದು ಹಾರೈಸುತ್ತೇನೆ.

ನವ್ಯ ವಿಮರ್ಶೆಯ ಬಗ್ಗೆ ಮುಖ್ಯವಾಗಿ ಕೃತಿನಿಷ್ಠ ವಿಮರ್ಶೆಯ ಬಗ್ಗೆ ಮೊಕಾಶಿಯವರು ಮಾಡುವ ಕೆಲವು ಆಪಾದನೆಗಳು ಗಂಭೀರವಾದುವು ಹಾಗೂ ಗಮನಾರ್ಹವಾದುವು. ಪ್ರತಿಭೆಯನ್ನು ಮುದುಡಿಸುವ ಈ ವಿಮರ್ಶೆ ಉಸಿರು ಕಟ್ಟಿಸುವ ವಾತಾವರಣವನ್ನು ಸೃಜನಶೀಲತೆಯಲ್ಲಿ ಉಂಟುಮಾಡಿತು. ಅರೆ ವಿದ್ಯಾವಂತ ಜನ ಸಾಹಿತ್ಯ ರಚಿಸದಂತೆ ಮಾಡಿ, ಒಳ್ಳೆಯ ದ್ವಿತೀಯ ದರ್ಜೆಯ ಕೃತಿಗಳು ಬರದಂತೆ ಮಾಡಿತು. ಇದರಿಂದಾಗಿ ಓದುಗ–ಲೇಖಕರ ನಡುವೆ ಕಂದಕ ವೇರ್ಪಟ್ಟು ವಿಮರ್ಶಕ–ಲೇಖಕರ ಸಂಚುಕೂಟವೇ ಏರ್ಪಟ್ಟಿತು. ಇವನು ನಮ್ಮ ಗುಂಪಿನವ ಆದುದರಿಂದ ಇವನು ಬರೆದದ್ದು ಚಲೋ ಎಂಬ ಅಭಿಪ್ರಾಯ. ತಮ್ಮ ಗುಂಪಿನವರ ಒಂದು ಸಾಧಾರಣ ಕೃತಿಯ ಬಗ್ಗೆಯೂ ಪತ್ರಿಕೆಗಳಲ್ಲಿ ದೀರ್ಘ ಚರ್ಚೆ

ಗುಂಪಿಗೆ ಸೇರದವರ ಕೃತಿಗಳ ಬಗ್ಗೆ ಉತ್ತಮವಾಗಿದ್ದರೂ ಚಕಾರವನ್ನೂ ಎತ್ತದ ಮೌನ, ಮುಖ್ಯವಾಗಿ ನವ್ಯ ಲೇಖಕನೂ ಕೂಡ ಸಮೃದ್ಧವಾಗಿ ಸೃಷ್ಟಿಸಲು ಸಾಧ್ಯ ವಾಗದ ವಾತಾವರಣವನ್ನು ನವ್ಯ ವಿಮರ್ಶೆ ನಿರ್ಮಿಸಿತು, ಎನ್ನುತ್ತಾರೆ.

ಕನ್ನಡದ ನವ್ಯ ವಿಮರ್ಶೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿರುವ ಬಹಳಷ್ಟು ಜನ ಮೊಕಾಶಿಯವರ ಮೇಲಿನ ಮಾತುಗಳನ್ನು ಒಪ್ಪುತ್ತಾರೆಂಬ ಭರವಸೆ ನನಗಿದೆ. ಎಲ್ಲ ನವ್ಯ ಲೇಖಕರೂ ಅಲ್ಲ, ಕೆಲವು ನವ್ಯ ಲೇಖಕರು ಸ್ವಾರ್ಥದಿಂದ, ತಮ್ಮ ಸೃಷ್ಟಿ ಶಕ್ತಿಯ ಬಗ್ಗೆ ಇದ್ದ ಅನುಮಾನದಿಂದಲೊ ಏನೊ, ತಮ್ಮನ್ನು ತಾವು ಮೆರೆಸಿಕೊಳ್ಳಲು ಗುಂಪುಗಾರಿಕೆ ಮಾಡಿದ್ದು ನಿಜ, ಇದರ ವಿರುದ್ಧ ಕೆಲವು ನವ್ಯ ಲೇಖಕರೇ ದನಿಯೆತ್ತಿದ್ದು ನಿಜ. ಆದರೆ ಈ ಗುಂಪುಗಳು ಒಳಜಗಳಗಳಿಂದ ಒಡೆ ದದ್ದು, ಒಡೆಯುತ್ತಿರುವುದು ಶುಭದ ಲಕ್ಷಣ, ಇದಕ್ಕೆ ಒಂದು ಸಾಹಿತ್ಯ ಪ್ರಕಾರ ಕಾರಣವಲ್ಲ, ಸಣ್ಣ ಜನ ಕಾರಣ.

ಮೊಕಾಶಿಯವರು "For me this is great poetry" ಎಂದಾಗ ಭಕ್ತಿ ಕಾವ್ಯದ ಬಗ್ಗೆ ಹಂಬಲಿಸುತ್ತಿರಲಿಲ್ಲ. ನವ್ಯ ಕಾವ್ಯದಲ್ಲಿ ಅಸ್ತಿತ್ವ ಕಳೆದುಕೊಂಡ ಅದಮ್ಯ ಜೀವನೋತ್ಸಾಹದ ಬಗ್ಗೆ ಹೇಳುತ್ತಿದ್ದರು. ನವ್ಯ ವಿಮರ್ಶೆಯಿಂದಾಗಿ ಜೀವನೋತ್ಸಾಹವನ್ನು ಮಿಡಿಯುವ ಕಾವ್ಯವೇ ಮಾಯವಾಯಿತು ಎಂಬ ಭಾವನೆ ಅವರ ಕುಣಿತದ ಹಿಂದಿದೆ. ಕನ್ನಡ ಲೇಖಕರಲ್ಲಿ ಈಗ ಈ ಅರಿವುಂಟಾಗಿದ್ದರೆ ಅದಕ್ಕೆ ಮೊಕಾಶಿಯವರೇ ಕಾರಣ.

ಪಾಶ್ಚಿಮಾತ್ಯ ವಿಮರ್ಶಕ ಹರ್ಬರ್ಟ್ ರೀಡ್. ದೈತ್ಯ ಕವಿ ಯೇಟ್ಸ್ ಬಗ್ಗೆ ಆರಾಧನಾ ಭಾವದಿಂದ ಬರೆಯುವ ಮೊಕಾಶಿಯವರು ಕೆಲವು ಪಾಶ್ಚಾತ್ಯ ಲೇಖಕರ ಬಗ್ಗೆ ಆಡುವ ಹೀನಾಯ ಮಾತುಗಳು, ಉದಾಹರಣೆಗೆ, ಸಾರ್ತ್ರ್, ಕಾಮೂ ಯಾ ಗಿಡದ ತೊಪ್ಪಲು? ಐರೋಪ್ಯ ವಿಚಾರಗಳು ನಮ್ಮ ಪಾಣಿನಿ, ಪತಂಜಲಿ ಇತ್ಯಾದಿ ಗಳ ಮೊಳಕಾಲಿಗೂ ಮುಟ್ಟುವುದಿಲ್ಲ ಇತ್ಯಾದಿ, ಮೊಕಾಶಿಯವರಂತಹ ಪ್ರಥಮ ದರ್ಜೆಯ ಪ್ರತಿಭಾವಂತ ವಿಮರ್ಶಕರು ಆಡುವ ಮಾತಲ್ಲ. ಕಾರಣ, ನವ್ಯರು ಆ ಲೇಖಕರಿಂದ ಪ್ರಭಾವಿತರಾದರೆ ಅದು ಆ ಲೇಖಕರ ತಪ್ಪಲ್ಲ.

ಒಟ್ಟಿನಲ್ಲಿ ನವ್ಯದ ಬಲೂನು ಉಬ್ಬುತ್ತ, ಉಬ್ಬುತ್ತ ಮೇಲೇರುತ್ತಿದ್ದಾಗ, ಅದನ್ನು ಉಬ್ಬಲು ಬಿಟ್ಟು, ನಿಜದ, ಸುಳ್ಳಿನ, ಸೂಜಿಮೊನೆಯಿಂದ ಚುಚ್ಚಿ ಚುಚ್ಚಿ ನವ್ಯ ಲೇಖಕರಲ್ಲಿ ಅರಿವುಂಟುಮಾಡುತ್ತಿದ್ದ ಮೊಕಾಶಿಯವರಿಗೆ ಅದೇ ಒಂದು ಗೀಳಾಗಿದ್ದು, ತಮ್ಮ ಸೃಷ್ಟಿ ಶಕ್ತಿಯ ಬಹುಪಾಲನ್ನು ಅದಕ್ಕೆ ವಿಸಿಯೋಗಿಸಿದ್ದು ಕನ್ನಡಕ್ಕೆ ಆದ ದೊಡ್ಡ ನಷ್ಟ.

ದ್ವಿತೀಯ ಶ್ರೇಣಿಯ ಕೃತಿಗಳು ಕನ್ನಡದಲ್ಲಿ ಬರಲಿಲ್ಲ ಎಂದು ಹಳಹಳಿಸಿ, ಅದಕ್ಕಾಗಿ ನಟನಾರಾಯಣಿ. ಅವಧೇಶ್ವರಿಯಂತಹ ದ್ವಿತೀಯ ಶ್ರೇಣಿಯ ಕೃತಿ ಗಳನ್ನು ರಚಿಸುವುದನ್ನು ಮೊಕಾಶಿಯವರು ಬಿಟ್ಟು ಗಂಗವ್ವ ಗಂಗಾಮಾಯಿ

ಯಂತಹ ಪ್ರಥಮ ದರ್ಜೆಯ ಅಂತಃಕರಣ ಕಾದಂಬರಿಗಳನ್ನು ರಚಿಸಲಿ. ಉಳಿದ ಲೇಖಕರಿಗೆ ಹೊಟ್ಟೆಕಿಚ್ಚಾಗುವಷ್ಟು ಚೆನ್ನಾಗಿ ಕತೆ ಹೇಳುವ, ತುಂಬ ಸಾಂದ್ರವಾದ, ವೈವಿಧ್ಯಮಯವಾದ ಅನುಭವಗಳಿರುವ ಮೊಕಾಶಿಯವರು ಪೆಟ್ಟುತಿಂದ ಮನುಷ್ಯನಂತೆ, ತಮ್ಮ ಎಲ್ಲ ಶಕ್ತಿಯನ್ನು ನವ್ಯಸಾಹಿತ್ಯದ ಅವಹೇಳನಕ್ಕೆ ಬಳಸದೆ ನಿಜವಾದ ಸೃಷ್ಟಿಕ್ರಿಯೆಯಲ್ಲಿ ಇನ್ನಾದರೂ ತೊಡಗಿಸಲಿ, ಹಾಗೆ ತೊಡಗಿಸುವರೆಂಬ ಭರವಸೆ, ಹೆದರಿಕೆ ನನಗಿದೆ.

---

ಭಾರತೀಯ ಭಾಷೆಗಳಿಂದ ಇಂಗ್ಲಿಷಿಗೆ ಅನುವಾದಿಸುವಾಗ ಒಬ್ಬ ಲೇಖಕ ಎದುರಿಸಬೇಕಾಗುವ ಸಮಸ್ಯೆಗಳನ್ನು ಮೊಕಾಶಿಯವರು ವಿಶ್ಲೇಷಿಸಿದ್ದಾರೆ. ಆದರೆ ಅವರ 'ಋತುಸಂಹಾರ'ದ ಅನುವಾದ ಸಿಗಲಿಲ್ಲವಾಗಿ ಆ ವಿಷಯವನ್ನು ಈ ಲೇಖನದಲ್ಲಿ ಎತ್ತಿಲ್ಲ.

# ವಿಳಾಸ

ಸಂಪಾದಕರು :

ಡಾ|| ಬಸವರಾಜ ಕಲ್ಗುಡಿ
ಅಧ್ಯಾಪಕ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦ ೦೫೬

ಲೇಖಕರು :

೧. ಡಾ|| ಎಂ. ಬಿ. ನೇಗಿನಹಾಳ
ಜಿ. ಎಚ್. ಕಾಲೇಜ್
ಹಾವೇರಿ-೫೮೧ ೧೧೦

೨. ಪಿ. ವಿ. ಕೃಷ್ಣಮೂರ್ತಿ
೪೪/೫, ಮಾರಮ್ಮನ ಗುಡಿ ಬ್ಲಾಕ್, ಹಳೇ ಮದ್ರಾಸ್ ರಸ್ತೆ
ಇಂದಿರಾನಗರ, ಬೆಂಗಳೂರು-೫೬೦೦೩೮

೩. ಎಸ್. ಶಿವಣ್ಣ
ಸಂಪಾದಕರು, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು-೫೬೦ ೦೫೬

೪. ಡಾ|| ಬಿ. ಆರ್. ಹಿರೇಮಠ
ರೀಡರ್, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

೫. ಡಾ|| ಎಸ್. ಪಿ. ಪಾಟೀಲ
ರೀಡರ್, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮ ೦೦೦೩

೬. ಕೆ. ಪಿ. ಈರಣ್ಣ
ಅಧ್ಯಾಪಕರು, ಇತಿಹಾಸ ವಿಭಾಗ
ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ-೫೮೦ ೦೦೩

೭. ಕೆಳದಿ ಗುಂಡಾ ಜೋಯಿಸ್
ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರ
ಕೆಳದಿ-೫೭೭ ೪೦೧, ಶಿವಮೊಗ್ಗ ಜಿಲ್ಲೆ

೮. ಡಾ|| ಅರವಿಂದ ಮಾಲಗತ್ತಿ
ರೀಡರ್, ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು-೫೭೪ ೧೯೯

೯. ಸೆಲ್ವಕುಮಾರಿ
ಸಂಶೋಧನ ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦ ೦೫೬

೧೦. ರತಿ, ಎಂ. ಟಿ.
ಸಂಶೋಧನ ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬.

೧೧. ಕ. ವೆಂ. ರಾಜಗೋಪಾಲ
ಎಂ. ಐ. ಜಿ.-೪೧, ೮೦ ಅಡಿ ರಸ್ತೆ
ಕೆಂಗೇರಿ ಉಪನಗರ, ೨ನೇ ಹಂತ, ಬೆಂಗಳೂರು-೫೬೦ ೦೬೦

೧೨. ಡಾ|| ಬಸವರಾಜ ಸಬರದ
ರೀಡರ್, ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ-೫೮೫ ೧೦೬

೧೩. ಡಾ|| ಎ. ಎಸ್. ವೇಣುಗೋಪಾಲರಾವ್
ಅಧ್ಯಾಪಕರು, ಕಮಲಾ ನೆಹರೂ ಕಾಲೇಜ್
ಶಿವಮೊಗ್ಗ

೧೪. ಕೆ. ಸತ್ಯನಾರಾಯಣ
ಆದಾಯ ತೆಂಗೆ ಅಧಿಕಾರಿ, ಕಮೀಷನರ್ ಆಫೀಸ್
ಸೆಂಟ್ರಲ್ ರೆವಿನ್ಯೂ ಬಿಲ್ಡಿಂಗ್
ಕ್ವೀನ್ಸ್ ರೋಡ್, ಬೆಂಗಳೂರು-೫೬೦ ೦೦೧

೧೫. ಟಿ. ಜಿ. ರಾಘವ
ಇಂಗ್ಲಿಷ್ ವಿಭಾಗ, ಎಂ. ಇ. ಎಸ್. ಕಾಲೇಜ್
ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

[ರಕ್ಷಾಕವಚದ ೨ನೆಯ ಪುಟದಿಂದ ಮುಂದುವರಿದುದು]

೩೮) ವಿನೋದ, ೩೯) ವಿವೇಕಾಭ್ಯುದಯ ೪೦) ವೇದಪ್ರಕಾಶ, ೪೧) ವೈದ್ಯತರಂಗಿಣಿ, ೪೨) ಸಂಕ್ರಮಣ, ೪೩) ಸನ್ಮತಿ, ೪೪) ಸದ್ಬೋಧಚಂದ್ರಿಕೆ, ೪೫) ಸಿದ್ಧಗಂಗಾ, ೪೬) ಕನ್ನಡ ಕಣ್ಮಣಿ, ೪೭) ಪೆನ್ಷನರ್, ೪೮) ಜಿನವಾಣಿ, ೪೯) ಕರ್ನಾಟಕದ ತೀರ್ಪುಗಳು, ೫೦) ವಾರ್ತಾಪತ್ರ, ೫೧) ವಾಸವಿ, ೫೨) ಆರೋಗ್ಯ ಯೋಗ, ೫೩) ಪತ್ರಿಕೆ, ೫೪) ವಿದ್ಯಾರ್ಥಿಬಂಧು, ೫೫) ಗಾಂಧಿ ಬಜಾರ್, ೫೬) ಬ್ರಹ್ಮತೇಜ, ೫೭) ಸಪ್ತಗಿರಿ, ೫೮) ನೇಸರು, ೫೯) ಸಂಕೀರ್ಣ, ೬೦) ಸ್ಫೂರ್ತಿ, ೬೧) ಸುಶೀಲ, ೬೨) ತುಳುವೇರ್, ೬೩) ಹಳ್ಳಿಯಿಂದ ದಿಲ್ಲಿಗೆ, ೬೪) ರೂಪತಾರ, ೬೫) ಶಾಸನವಾಣಿ, ೬೬) ಶುಭಯೋಗ, ೬೭) ಗ್ರಾಮಕ್ಷೇಮ, ೬೮) ಕರ್ನಾಟಕ ವ್ಯವಸಾಯ ಪತ್ರಿಕೆ, ೬೯) ಕನ್ನಡ ವಾರ್ತೆ, ೭೦) ಪಕೃತಿ ಜೀವನ, ೭೧) ನಾದಸಂದೇಶ, ೭೨) ಅನುಗ್ರಹ, ೭೩) ಅನ್ವೇಷಣೆ, ೭೪) ಅಮರ ಜೀವನ, ೭೫) ಆದಿಚುಂಚನಗಿರಿ, ೭೬) ಆರೋಗ್ಯವಾಣಿ, ೭೭) ಪ್ರಸಾರ ನೀತಿ, ೭೮) ಮಹಿಳಾ ಮಕ್ಕಳ ಸೇವಾ, ೭೯) ಯೋಗವಾಣಿ, ೮೦) ವಿದ್ಯಾರ್ಥಿ ಬಂಧು, ೮೧) ಸಂಬಂಧ, ೮೨) ಸೋವಿಯತ್ ಸಮೀಕ್ಷೆ, ೮೩) ಸೋವಿಯತ್ ದೇಶ.

ದ್ವೈಮಾಸಿಕ: ೧) ಪ್ರಸಾದ ೨) ಸಂಬಂಧ.

ತ್ರೈಮಾಸಿಕ: ೧) ತರಳಬಾಳು, ೨) ಪ್ರಬುದ್ಧಕರ್ಣಾಟಕ, ೩) ಮಾನವಿಕ ಕರ್ಣಾಟಕ, ೪) ಸಾಧನೆ, ೫) ಕರ್ಣಾಟಕ ಭಾರತಿ ೬) ಯುವ ಕರ್ನಾಟಕ, ೭) ಶಿವಾನುಭವ, ೮) ಶರಣ ಸಂತಾನ, ೯) ವಿಜ್ಞಾನ ಕರ್ನಾಟಕ, ೧೦) ಮಾಮಿಡಿ, ೧೧) ಹೊಂಬೆಳಕು, ೧೨) ಯುಗರಶ್ಮಿ, ೧೩) ಜ್ಯೋತಿಷ್ಯ ಸುಧಾ, ೧೪) ಬಸವ ಬೆಳಕು, ೧೫) ಅನುಭವ ಪಥ.

ಷಾಣ್ಮಾಸಿಕ: ೧) ಅಮರ್ ಕೊಂಕಣಿ, ೨) ಮಾನವಿಕ ಭಾರತಿ.

## ENGLISH

**Weekly:** 1. Federal India & Indian States, 2. Moscow News.

**Fortnightly:** Kurukshetra

**Monthly:** 1. Dasa Jyothi, 2. 4. Soviet Land, 6. G.D.R. Report.

**Quarterly:** 1. Journal of Karnataka University, 2. American Review, 3. Basava Journal, 4. Mythic Society.

ಕನ್ನಡ ಪತ್ರಿಕೋದ್ಯಮದ ೧೪೫ನೇ ವರ್ಷಾಚರಣೆಯ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಪತ್ರಿಕಾ ಅಕಾಡೆಮಿಯು ೨೫ ವರ್ಷ ದಾಟಿದ ಕನ್ನಡ ಪತ್ರಿಕೆಗಳನ್ನು ಸನ್ಮಾನಿಸಿತು. ಆ ಸಂದರ್ಭದಲ್ಲಿ ಅಕಾಡೆಮಿಯು ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯನ್ನು ಸನ್ಮಾನಿಸಿ 'ಸನ್ಮಾನ ಪತ್ರ' ನೀಡಿತು. ಅದರ ಪೂರ್ಣಪಾಠವನ್ನು ಕೆಳಗೆ ಕೊಡಲಾಗಿದೆ.

—ಸಂಪಾದಕ

# ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು

## ಸನ್ಮಾನ ಪತ್ರ

ಕಾಲು ಶತಮಾನ ತುಂಬಿ ಇಂದಿಗೂ
ನಡೆಯುತ್ತಿರುವ

**ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**

ಪತ್ರಿಕೆಯ ಸೇವೆಯನ್ನು ಪರಿಗಣಿಸಿ
ಕನ್ನಡ ಪತ್ರಿಕೋದ್ಯಮದ
೧೪೫ನೆಯ ವರ್ಷಾಚರಣೆಯ ಸಂದರ್ಭದಲ್ಲಿ
ಈ ಸನ್ಮಾನಪತ್ರ ನೀಡಲಾಗಿದೆ

ಸಹಿ
ಎಸ್. ಎಚ್. ರಾಜಣ್ಣ
ಕಾರ್ಯದರ್ಶಿ

ಸಹಿ
ಜಿ. ನಾರಾಯಣ
ಅಧ್ಯಕ್ಷರು

೨೪ ಜನವರಿ ೧೯೯೦

ಬಿ ಎಂ ಶ್ರೀ ಅಚ್ಚುಕೂಟ